

ಎಂಥಾದ್ದೋ ಹರಿಯ ಕರುಣ ॥ ಪ ॥

ಎಂಥಾದ್ದೋ ಹರಿಯ ಮಹಿಮೆ
ಎಂಥದ್ದೆನ್ನ ಬಾರದು ಗಡ ॥ ಅ.ಪ ॥

ಅಂತ್ಯವಿಲ್ಲದ ನಿಜಾನಂದ ತೃಪ್ತನು ಗಡ
ಸಂತರೊಕ್ಕುಡಿತೆಯ ಜಲಕೆ ಹಿಗ್ಗುವ ಗಡ 1

ಸನಕಾದಿ ಮುನಿಮನಕೆ ಸಿಲುಕದಗಮ್ಯನು ಗಡ
ನೆನೆವವರ ಮನದಣಿಯೆ ತನ್ನ ತೋರುವ ಗಡ 2

ಶ್ರುತಿತತಿಗೆ ವೈದೋರದತಿ ಮಹಿಮನು ಗಡ
ಮತಿಯುಳ್ಳವನ ಭಕ್ತಿ ಸ್ತುತಿಗೆ ಹಿಗ್ಗುವ ಗಡ 3

ಲೋಕಪತಿಗಳಿಗೆಲ್ಲ ಒಡೆಯ ತಾನೆ ಗಡ
ಬಾಕುಳಿಕನಾಗಿ ಭಕುತರ ವಶದಲ್ಲಿಪ್ಪ ಗಡ 4

ಆರರೊಳು ಸಡ್ಡೆಯಿಲ್ಲದ ನಿಸ್ಸಂಗನು ಗಡ
ಸಾರಿದವರಿಗೆ ತಂದೆತಾಯಿ ಸಿರಿಕೃಷ್ಣ ಗಡ 5

— ಶ್ರೀವ್ಯಾಸರಾಯರು




ಗೌರವ ಸಂಪಾದಕರು :

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


**ಸಂಪುಟ ೧೪] ಮಾರ್ಚ್ ೧೯೮೪ [ಸಂಚಿಕೆ ೧೦**


# ವಿಷಯಸೂಚಿ




ದೇವರು ಸರ್ವಾಂತರ್ಯಾಮಿ, ಸರ್ವಶೇಷಿಯೆಂದರು. ‘ಹೋರಾಟವಿಕ್ಕಿಸಲು ಬೇರಾದೆಯಲ್ಲದೆ ಬೇರುಂಟೆ ಜಗದೊಳಗೆ ಎಲೆ ದೇವನೆ’ ಎಂದಿತು ಕವಿವಾಣಿ. ಆವರಿವರು ಹೇಳುವುದೇನು ಬಂತು, ಅವನೇ ‘ಗೀತೆಯಲ್ಲಿ ಬೇರೆ ಬೇರೆ ದೇವರುಗಳನ್ನು ಪೂಜಿಸಿದರೂ ಆಯಾಯಾ ದೇವರ ರೂಪದಲ್ಲಿ ನನ್ನನ್ನೇ ಪಡೆಯುತ್ತಾರೆ’ ಎಂದು ತನ್ನ ಬೇರೆಯಾಗದ ಬೇರಿನ ಬಗ್ಗೆ ವಿವರ ನೀಡಿದ್ದಾನೆ. ಎಂತಲೇ ಕವಿವಾಣಿ – ಮುನಿಮನ ಮತ್ತೆ ನುಡಿಯಿತು – “ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ”. ಅದನ್ನೇ ಅನ್ನಮಾಚಾರ್ಯರೆಂದದ್ದು “ಅನ್ನಿ ಚೋಟ್ಲ ಪರಮಾತ್ಮ ನೀವು ಇನ್ನಿರೂಪುಲ ಭ್ರಾವಯಿಂತುವುಗಾ”.

ಈ ಕೀರ್ತನೆಯಲ್ಲಿ ಅನ್ನಮಾಚಾರ್ಯ ತಿರುಮಲೆಯಿಂದ ಹಿಡಿದು ಬದರಿಯವರೆಗೆ, ಮಧುರೆಯಿಂದ ಆಯೋಧ್ಯಾ ಚಿತ್ರಕೂಟಗಳವರೆಗೆ ಎಲ್ಲ ಕಡೆಯಿರುವ ದೇವರುಗಳೂ ವೆಂಕಟೇಶ್ವರನೇ ಎಂದು ಕಂಡುಕೊಳ್ಳುತ್ತಾರೆ. ಎಂದರೆ ಸಮುದ್ರದಿಂದ ಉತ್ತರಕ್ಕೆ ಹಿಮನಗದಿಂದ ದಕ್ಷಿಣಕ್ಕೆ ಇರುವ ಒಂದು ಭೌಗೋಳಿಕ ಖಂಡದಲ್ಲಿನ ಸಾಂಸ್ಕೃತಿಕ, ಧಾರ್ಮಿಕ ಏಕತೆಯನ್ನು ಇಲ್ಲಿ ನಿರೂಪಿಸಲಾಗಿದೆ. ಈ ಭೂಖಂತ ಭಾರತವೂ ಈ ಸಂಸ್ಕೃತಿ ಭಾರತೀಯವೂ ಈ ಧರ್ಮ ಹಿಂದೂ ಧರ್ಮವೂ ಆಗಿದೆಯೆಂದು ಹೇಳಬೇಕಿಲ್ಲ. ಇಂತಲ್ಲಿ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯತ್ತ ಜನ ಆಕರ್ಷಿತರಾಗಲು ಕಾರಣವೇನು ? ಅಲ್ಲಲ್ಲಿಯೇ ಇದ್ದು ಆಯಾಯಾ ದೇವರುಗಳನ್ನೇ ಆರಾಧಿಸಿ, ಅಪೇಕ್ಷಿತ ಕಾಮ್ಯ, ನಿಷ್ಕಾಮ್ಯ ಫಲಗಳನ್ನು ಪಡೆಯಬಾರದೇಕೆ ? ಎನ್ನುವ ಪ್ರಶ್ನೆಯುಂಟಾಗುವುದು ಸಹಜ.

ಪ್ರತಿ ಕ್ಷೇತ್ರಕ್ಕೂ ಒಂದೊಂದು ಐತಿಹಾಸಿಕ, ಪ್ರಾಕೃತಿಕ, ಭೌಗೋಳಿಕ, ಆಧ್ಯಾತ್ಮಿಕ ಹಿನ್ನೆಲೆಯಿರುತ್ತದೆ. ಎಲ್ಲ ಕ್ಷೇತ್ರಗಳೂ ಪಾವಿತ್ರ್ಯ, ದೈವಿಕತೆಗಳಲ್ಲಿ ಸಮಾನವೇ ಆದರೂ, ಅವು ಉಂಟುಮಾಡುವ ಮಾನವಾನುಭವದಲ್ಲಿ, ಅನುಭಾವದಲ್ಲಿ ಹೆಚ್ಚು ಕಡಮೆಯಿರುವುದುಂಟು. ಇಂತಲ್ಲಿ ತಮಿಳು, ತೆಲುಗು, ಕನ್ನಡ ನುಡಿಗಳ ಸಂಧಿ ಸ್ಥಾನವಾಗಿ, ಪೂರ್ವಪಶ್ಚಿಮ ಘಟ್ಟಗಳ ಕೂಡಲಾಗಿ, ವೈಕುಂಠದ ಅಂಶವೊ ಎಂಬಂತೆ ಪ್ರಶಾಂತ ಸುಂದರವಾಗಿ ಇರುವ ತಿರುಮಲೆ ಬೆಟ್ಟಗಳು ಜನಸಾಮಾನ್ಯ ಜೀವನದ ಉಲ್ಲೋಲಕಲ್ಲೋಲಗಳಿಗೆ, ರಾಜಕೀಯದ ಏಳುಬೀಳುಗಳಿಗೆ ದೂರವಾಗಿ ಇತಿಹಾಸ ಪೂರ್ವಕಾಲದಿಂದ ಋಷಿ ಮುನಿಗಳನ್ನು, ಕವಿಸಂತರನ್ನು, ರಾಜ, ಪ್ರಜೆಗಳನ್ನು ಏಕತ್ರ ಆಕರ್ಷಿಸಿವೆ ಎನ್ನಲು ಭಾಷೆ, ಭೂಗೋಳ, ಇತಿಹಾಸ, ಸಂಸ್ಕೃತಿ, ಮೊದಲಾದ ಕಾರಣಗಳಿಗಿಂತ ಮಿಗಿಲಾಗಿ, ಜನ ಮನದಲ್ಲಿ ಭಗವಂತ – ಭಕ್ತ, ದೇವ – ಜೀವಗಳ ಬಗ್ಗೆ ಇರುವ ನಂಬಿಕೆಗಳು ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ಸಾಕಾರವಾಗಿರುವುದೇ ಮುಖ್ಯಕಾರಣ ಎಂದು ಹೇಳಬೇಕಾಗುತ್ತದೆ.

ದೂರದೂರದ ಪ್ರದೇಶಗಳಿಗೆ ಸೇರಿದ ಜನರೆಲ್ಲ ತಿರುಮಲೆಯತ್ತ ಕೇಂದ್ರೀಕೃತರಾಗಿ ಬರುತ್ತಿರುವುದು ಬಹುಪೂರ್ವದ ಕಾಲದಿಂದಲೂ ಕಂಡುಬರುತ್ತಿರುವ ಅಂಶವೇ ಆಗಿದೆ. ವಿವಿಧ ವರ್ಗಗಳ, ವಿವಿಧ ಪ್ರದೇಶಗಳ ಜನದ ಪ್ರತಿನಿಧಿಗಳೋ ಎಂಬಂತೆ ಆಳ್ವಾರರು, ಹರಿದಾಸರು, ಬಯಕಾರರು ಕಂಡುಬರುತ್ತಾರೆ. ಇಂತಲ್ಲಿ ಈ ತಿಂಗಳು ಮೂವರು – ಕುಲಶೇಖರ ಆಳ್ವಾರ್, ವ್ಯಾಸರಾಯರು, ಅನ್ನಮಾಚಾರ್ಯ–ಇವರ ಆರಾಧನೆ ಮಾಡಬಹುದಾದ ಸಂದರ್ಭ ಒದಗಿ ಬಂದಿದೆ. ಮೂವರೂ ಶ್ರೀ ವೆಂಕಟೇಶ್ವರಸ್ವಾಮಿಯ ಭಕ್ತರೇ. ಮೂವರೂ ಸಾಮಾಜಿಕವಾಗಿ, ತಮ್ಮ ಸುತ್ತಲ ಜೀವನವನ್ನು ಪರಿಷ್ಕರಿಸಲು ಪ್ರಯತ್ನಿಸಿದವರೇ. ಮೂವರೂ ಮುಂದಿನ ತಲೆಮಾರುಗಳು ಹೆಮ್ಮೆಯಿಂದ ನೆನೆಯಲು, ಎಚ್ಚರಿಕೆಯಿಂದ ಅನುಸರಿಸಲು ಮಾರ್ಗದರ್ಶನ ಮಾಡಿದವರೇ. ಹಾಗಾಗಿ ಇವರನ್ನು ನೆನೆಯುವುದರ ಮೂಲಕ ಶ್ರೀ ವೆಂಕಟೇಶ್ವರಸ್ವಾಮಿಯನ್ನು ನೆನೆಯುತ್ತ ಇವರುಗಳು ನಮಗೆ ಬಿಟ್ಟು ಹೋಗಿರುವ ಸಾಹಿತ್ಯದ ಅಧ್ಯಯನಕ್ಕೆ ತೊಡಗುವ ಮನವನ್ನು ನೀಡಲು ಸ್ವಾಮಿಯನ್ನು ಬೇಡುವ.

## ರಕ್ಷಾಪತ್ರ ಚಿತ್ರಸೂಚಿ

### ಕುಲಶೇಖರ ಆಳ್ವಾರ್ : (ಪುಟ–2)

ದಕ್ಷಿಣಭಾರತದಲ್ಲಿ ವೈಷ್ಣವ ಭಕ್ತಿಯನ್ನು ಹರಡಿದ ಮೊದಲಿಗರಲ್ಲಿ ಪ್ರಮುಖರು ಆಳ್ವಾರರು. ಅವರು ಹನ್ನೆರಡು ಮಂದಿ. ದ್ರವಿಡ ಭಾಷೆಯಲ್ಲಿ ನಾಲಾಯಿರ ದಿವ್ಯಪ್ರಬಂಧಗಳು ಎಂಬ ನಾಲ್ಕು ಸಾವಿರ ಉತ್ಕೃಷ್ಟ ಭಾವಗೀತೆಗಳೆಂದು ಹೇಳಬಹುದಾದ ಪಾಶುರಗಳನ್ನು ರಚಿಸಿದವರು. ಅವರಲ್ಲಿ ಹಲವರು ಸಂಸ್ಕೃತವನ್ನೂ ಬಲ್ಲವರು, ಸಂಸ್ಕೃತದಲ್ಲೂ ಕೃತಿರಚನೆ ಮಾಡಿದವರುಂಟು. ಕುಲಶೇಖರ ಆಳ್ವಾರ್ ಒಬ್ಬರು.

ಕುಲಶೇಖರ ಆಳ್ವಾರರು ಜನ್ಮತಃ ರಾಜರು. ದಕ್ಷ ಆಡಳಿತಗಾರರಾಗಿ, ಪ್ರಜಾನುರಾಗಿಗಳಾಗಿ ರಾಜ್ಯಭಾರ ಮಾಡುತ್ತಿದ್ದರೂ, ಅವರಿಗೆ ಭಾಗವತದಲ್ಲಿ ಆಸಕ್ತಿ ಹೆಚ್ಚು. ರಾಮಾಯಣ ಮಹಾಭಾರತಗಳಲ್ಲಿ, ಅವುಗಳ ಪ್ರವಚನದಲ್ಲಿ ಪ್ರವೃತ್ತಿ ಹೆಚ್ಚು. ಕಾವೇರೀನದೀತಟದ ಶ್ರೀರಂಗನಾಥ, ಶೇಷಾಚಲದ ಶ್ರೀ ವೆಂಕಟೇಶ್ವರಸ್ವಾಮಿಗಳಲ್ಲಿ ಹೃದಯ ತುಂಬಿದ ಭಕ್ತಿ. ಅವರು ಬರೆದದ್ದು ತಮಿಳು, ಸಂಸ್ಕೃತಗಳಲ್ಲಿ. 'ಪೆರುಮಾಳ್ ತಿರುಮೊಳಿ' ಹಾಗೂ 'ಮುಕುಂದಮಾಲಾ'. ತಿರುಪತಿ, ಶ್ರೀರಂಗ, ಚಿತ್ರಕೂಟ, ಅಯೋಧ್ಯಾ ಮೊದಲಾದ ದಿವ್ಯ ದೇಶಗಳನ್ನು ತಿರುಗಿ ಅಲ್ಲಲ್ಲಿನ ಅಂದಂದಿನ ಅರ್ಚಾಮೂರ್ತಿಗಳನ್ನು ಕುರಿತು ಹಾಡಿರುವುದೇ ಈ ಕೃತಿಗಳ ಸಾರ. ರಾಮಾಯಣ, ಮಹಾಭಾರತ, ಭಾಗವತಾದಿ ಗ್ರಂಥಗಳಿಂದಲೂ ತಮ್ಮ ಅನುಭವಗಳಿಗಾಗಿ, ಆದರ್ಶಗಳಿಗಾಗಿ, ಆಕಾಂಕ್ಷೆಗಳಿಗಾಗಿ, ಉದಾಹರಣೆಗಳನ್ನು ದೃಷ್ಟಾಂತಗಳನ್ನು ತೆಗೆದುಕೊಂಡಿದ್ದಾರೆ. ಅವರ ಮುಕುಂದ ಮಾಲಾ ಕೃತಿಯನ್ನು ವಿದ್ವಾಂಸರು ಜಯದೇವನ ಗೀತಗೋವಿಂದಕ್ಕೆ ಹೋಲಿಸಿರುವುದುಂಟು. ಅವರ ಪೆರುಮಾಳ್ ತಿರುಮೊಳಿಯಲ್ಲಿನ ಒಂದು ಪದ್ಯಸಾರ ಹೀಗಿದೆ – 'ಮಾಂಸವನ್ನು ಹೆಚ್ಚಿಸುವ ಸಂಪತ್ತಿನೊಡನೆ ಜನಿಸಲು ನಾನು ಬಯಸುವುದಿಲ್ಲ. ಸಪ್ತರ್ಷಿಸ್ತುತನಾದ ಶ್ರೀಕೃಷ್ಣನ ಪಾದಗಳ ಸೇವೆಯೇ ನನಗೆ ಅಪೇಕ್ಷಣೀಯ. ಆದಕ್ಕಾಗಿ, ಕೈಯಲ್ಲಿ ಶಂಖ ಹಿಡಿದು ನಿಂತಿರುವ ಶ್ರೀನಿವಾಸ ವೆಂಕಟಾಚಲದಲ್ಲಿ ಹಕ್ಕಿಯಾಗಿಯಾದರೂ ಜನ್ಮವೆತ್ತಲು ಅಪೇಕ್ಷಿಸುತ್ತೇನೆ'. ಇನ್ನೂ ಒಂದು ಹೆಜ್ಜೆ ಮುಂದುವರೆದು ಅವರು ಶ್ರೀವೆಂಕಟೇಶ್ವರ ಸ್ವಾಮಿಯ ದೇವಾಲಯದಲ್ಲಿ ಬಾಗಿಲ ಬಳಿ ಮೆಟ್ಟಿಲಾಗಿರಬೇಕೆಂದು ಬಯಸುತ್ತಾರೆ. "ಪಡಿಯಾಯ್ ಕಿಡಂದು ಉನ್ ಪವಳವಾಯ್ ಕಾಣ್ಬೇನೇ". ಮೆಟ್ಟಿಲಾಗಿದ್ದು ನಿನ್ನ ಹವಳದಂತಹ ತುಟಿಗಳನ್ನು ನೋಡಬೇಕು ಎಂಬ ಅವರ ಅಪೇಕ್ಷೆಯ ಸಾಕ್ಷಾತ್ಕಾರವೆಂಬಂತೆಯೇ ತಿರುಮಲೆಯ ಶ್ರೀವೆಂಕಟೇಶ್ವರಸ್ವಾಮಿಯ ಗರ್ಭಗುಡಿಯಲ್ಲಿ ಕುಲಶೇಖರಪಡಿಯಿದೆ.

ನಲವತ್ತು ಪದ್ಯಗಳನ್ನು ಹೊಂದಿದ 'ಮುಕುಂದಮಾಲಾ' ಕುಲಶೇಖರ ಆಳ್ವಾರರು ಮುಕುಂದನನ್ನು ಕುರಿತು ಹಾಡಿದ ಸ್ತೋತ್ರ ಮಾಲೆ. ನಿನ್ನ ಸೇವಕರ-ಸೇವಕರ ಸೇವಕನನ್ನಾಗಿ ನನ್ನನ್ನು ತಿಳಿ ಎಂದು ದೈವಕ್ಕೆ ವಿನಂತಿಸುತ್ತ, ತಮ್ಮ ನಾಲಗೆಯನ್ನು ಕೇಶವ ಸಂಕೀರ್ತನೆ ಮಾಡಲೂ, ಮನವನ್ನು ಮುರಾರಿಯನ್ನು ಭಜಿಸಲು, ಕೈಗಳನ್ನು ಅವನನ್ನು ನಮಿಸಲೂ, ಪಾದಗಳನ್ನು ಅವನ ದೇವಾಲಯಕ್ಕೆ ಹೋಗಲೂ, ಮೂಗನ್ನು ಅವನ ಪಾದಗಳಲ್ಲಿ ಅರ್ಚಿಸಲ್ಪಟ್ಟ ತುಳಸಿಯನ್ನು ಆಘ್ರಾಣಿಸಲೂ, ಶಿರವನ್ನು ಅವನಿಗೆ ಬಾಗಲೂ ಬೇಡುತ್ತಾರೆ. 'ಯಾವುದು ಹೇಗಾದರೂ ಆಗಲಿ ಮನ ನಿನ್ನಲ್ಲಿರಲಿ' ಎಂಬುದೇ ಅವರ ಬೇಡಿಕೆ.

ನಾಸ್ಥಾ ಧರ್ಮೇ ನ ವಸುನಿಚಯೇ
ನೈವ ಕಾಮೋಪಭೋಗೇ
ಯದ್ಯದ್ ಭವ್ಯಂ ಭವತು ಭಗವನ್
ಪೂರ್ವಕರ್ಮಾನುರೂಪಂ
ಏತತ್ ಪ್ರಾರ್ಥ್ಯಂ ಮಮ ಬಹುಮತಂ
ಜನ್ಮ ಜನ್ಮಾಂತರೇಽಪಿ
ತ್ವತ್ ಪಾದಾಂಭೋರುಹಯುಗ
ಗತಾ ನಿಶ್ಚಲಾ ಭಕ್ತಿರಸ್ತು

### ವ್ಯಾಸರಾಯರು : (ಪುಟ–3)

ಕರ್ನಾಟಕದಲ್ಲಿ ಹರಿಭಕ್ತಿಯನ್ನು ಹರಡಿದವರಲ್ಲಿ ಮಧ್ವ ಮತಾನುಯಾಯಿಗಳು ಮುಖ್ಯರು. ಅವರಲ್ಲಿ ವ್ಯಾಸರಾಯರು ಒಂದು ಸಂಸ್ಥೆಯಂತೆ ಕೆಲಸ ಮಾಡಿದವರು. ದ್ವೈತ ಸಿದ್ಧಾಂತದ ಶಾಸ್ತ್ರೀಯ ವಿವರಣೆ, ವ್ಯಾಖ್ಯಾನ, ಅನುವಾದ ಮೊದಲಾದವುಗಳನ್ನು ಸಂಸ್ಕೃತದಲ್ಲಿ ಪಂಡಿತಗಮ್ಯವಾಗುವಂತೆ ಪರಿವ್ರಾಜಕರಾಗಿ ಪಸರಿಸಿದ ಕೀರ್ತಿ ವ್ಯಾಸಕೂಟಕ್ಕೆ ಸಂದರೆ, ಅದು ಪಾಮರ – ಜನಸಾಮಾನ್ಯಗಮ್ಯವಾಗುವಂತೆ ಪಸರಿಸಿದ ಕೀರ್ತಿ ದಾಸಕೂಟಕ್ಕೆ ಸಲ್ಲುತ್ತದೆ. ಎರಡೂ ಕವಲುಗಳಲ್ಲೂ ಹರಿಭಕ್ತಿ ಸಮಾನ. ಎರಡೂ ಕವಲುಗಳೂ ವ್ಯಾಸರಾಯರಿಂದಲೇ ವ್ಯವಸ್ಥಿತ. ಮಧ್ವ ಮೂಲದ ಮೇಲೆ ನಿಂತ ಹರಿಭಕ್ತಿ ತರುವಿಗೆ ವ್ಯಾಸರಾಯರು ದಾಸವ್ಯಾಸ ಶಾಖೆಗಳ ಆರಂಭ. ಎಂತಲೇ ಅವರು ಕರ್ನಾಟಕದ ಜನತೆಗೆ ಪ್ರಾತಃಸ್ಮರಣೀಯರು.

ಮುಳಬಾಗಿಲಿನ ಶ್ರೀಪಾದರಾಜರು ಶ್ರೀರಂಗದಲ್ಲಿದ್ದವರು. ತಮಿಳು ಆಳ್ವಾರುಗಳ ಪ್ರಬಂಧಗಳನ್ನು ಕೇಳಿದ್ದವರು. ಅಂತೆಯೇ ಜನರ ಆಡು ನುಡಿಯಲ್ಲಿ ಭಕ್ತಿ ತತ್ತ್ವವನ್ನು ಪ್ರಸಾರ ಮಾಡುವುದರ ಅಗತ್ಯವನ್ನು ಅರಿತವರು. ಕನ್ನಡದಲ್ಲಿ ತಾವೇ ಅನೇಕ ಕೀರ್ತನೆಗಳನ್ನು ರಚಿಸಿ ಹರಿಗರ್ಪಿಸಿದವರು. ವಾಗ್ವಜ್ರದಂತಹ ಪ್ರಕಾಂಡ ಪಂಡಿತ ಕೃತಿಯನ್ನು ರಚಿಸಿದವರು. ಅಂತಹವರ ಬಳಿ ಆಯಿತು ವ್ಯಾಸರಾಯರ ಸಮಾಜೋದ್ಧರಣದ ಮೊದಲ ಪಾಠಗಳು. ವಿಜಯನಗರದ ಅರಸರು ಗುರುಶಿಷ್ಯರಿಬ್ಬರನ್ನೂ ಗೌರವಿಸುತ್ತಿದ್ದರು. ತಮ್ಮ ಲೌಕಿಕ ಅಲೌಕಿಕ ಸಮಸ್ಯೆಗಳಿಗೆ ಇವರಲ್ಲಿ ಪರಿಹಾರ ಕಂಡುಕೊಳ್ಳುತ್ತಿದ್ದವರು. ಹಾಗಾಗಿ ವ್ಯಾಸರಾಯರಿಗೆ ಧರ್ಮಪ್ರಸಾರ–ಭಕ್ತಿಪ್ರಸಾರ ಕಾರ್ಯದಲ್ಲಿ ನಿರಾತಂಕರಾಗಿ ತಮ್ಮನ್ನು ತಾವು ತೊಡಗಿಸಿಕೊಳ್ಳಲು ಸಾಧ್ಯವಾಯಿತು.

ವ್ಯಾಸರಾಯರ ಬಳಿಯಲ್ಲಿ ಕಲಿತು ಧರ್ಮ ವಿಜಯದ ಪತಾಕೆಯನ್ನು ಹಿಡಿದು ಹೊರಟವರು ಹಲವು ಮಂದಿ. ವಾದಿರಾಜರು ಮೊದಲಾದವರು ವ್ಯಾಸಕೂಟದ ಶಾಖೆಯಲ್ಲಿ ಹೊರಟವರು, ಪುರಂದರರು, ಕನಕರು ಮೊದಲಾದವರು ದಾಸಕೂಟದ ಹಾದಿಯಲ್ಲಿ ಹೊರಟವರು. ಹಾಗಾಗಿ ಇಡೀ ಕರ್ನಾಟಕದ ಜನತೆ ಹರಿಭಕ್ತಿಯ ಸುಧೆಯಲ್ಲಿ ಓಲಾಡುವಂತಾಯಿತು ಎಂಬುದು ಸ್ಪಷ್ಟ.

ತಿರುಮಲೆಯ ಶ್ರೀವೆಂಕಟೇಶ್ವರಸ್ವಾಮಿಗೂ ವ್ಯಾಸರಾಯರಿಗೂ ಹತ್ತಿರದ ಸಂಬಂಧವುಂಟಾಗಲು ವಿಜಯನಗರದರಸರು, ಶ್ರೀಪಾದರಾಯರು ನೃಸಿಂಹತೀರ್ಥಗಳೇ ಕಾರಣವಲ್ಲ. ವೆಂಕಟೇಶ್ವರ ಸ್ವಾಮಿಯಲ್ಲಿ ಅವರಿಗಿದ್ದ ಅತ್ಯಂತ ಭಕ್ತಿಯೇ ಕಾರಣ. ತಿರುಪತಿ ತಿರುಮಲೆಗಳಲ್ಲಿ ಇರುವ ಶಾಸನಗಳು ವ್ಯಾಸರಾಯರಿಗೆ ವಿಜಯನಗರದ ರಾಯರು ನೀಡಿದ ದತ್ತಿಗಳನ್ನೇ ಅಲ್ಲದೆ, ವ್ಯಾಸರಾಯರು ತಿರುಮಲೆಯೊಡೆಯನ ಸೇವೆಯಲ್ಲಿ ನೀಡಿದ ದತ್ತಿಗಳನ್ನೂ ತಿಳಿಸುತ್ತವೆ. ಇಂದಿಗೂ ಇರುವ ವ್ಯಾಸರಾಯ ಮಠ ಅವರು ಅಂದು ಶ್ರೀನಿವಾಸನಿಗೆ ಮಾಡಿದ ಸೇವೆಯ ದ್ಯೋತಕವಾಗಿದೆ..

ವ್ಯಾಸರಾಯರು ಸಂಸ್ಕೃತದಲ್ಲಿ ಕೃತಿರಚನೆಯನ್ನೂ ಮಾಡಿದರು. ತಾತ್ಪರ್ಯ ಚಂದ್ರಿಕೆ, ನ್ಯಾಯಾಮೃತ, ತರ್ಕತಾಂಡವ, ಮಾಯಾವಾದ ಖಂಡನ ಟೀಕಾ ಮಂದಾರ ಮಂಜರಿ, ಉಪಾಧಿ ಖಂಡನ ಟೀಕಾ ಮಂದಾರ ಮಂಜರಿ, ಪ್ರಪಂಚ ಮಿಥ್ಯಾತ್ವಾನುಮಾನ ಟೀಕಾ ಮಂದಾರ ಮಂಜರಿ, ತತ್ತ್ವ ವಿವೇಕ ಟೀಕಾ ಮಂದಾರ ಮಂಜರಿ, ಭೇದೋಜ್ಜೀವನ – ಮೊದಲಾದವು ಅವರು ವ್ಯಾಸಕೂಟಕ್ಕೆ ಗುರುವಾಗಿ ನೀಡಿದ ಮೊದಲ ಕಾಣಿಕೆಗಳಾದರೆ ಅವರ ಅಸಂಖ್ಯ ಕನ್ನಡ ಕೀರ್ತನೆಗಳು ಅವರು ದಾಸಕೂಟದ ಗುರುವಾಗಿ ನೀಡಿದ ಮೊದಲಕಾಣಿಕೆಗಳಾಗಿವೆ.

(39 ನೇ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೧೦ ನೆಯ ಅಧ್ಯಾಯ

# ಭಗವಂತನ ಮಹಿಮೆ

( ಮುಂದುವರಿಸಿದ್ದು )

ಶ್ರೀ ಭಗವಾನುವಾಚ—

ಭೂಯ ಏವ ಮಹಾಬಾಹೋ
ಶೃಣು ಮೇ ಪರಮಂ ವಚಃ ।
ಯತ್ತೇಽಹಂ ಪ್ರೀಯಮಾಣಾಯ
ವಕ್ಷ್ಯಾಮಿ ಹಿತಕಾಮ್ಯಯಾ ॥ ೧

ಶ್ರೀಕೃಷ್ಣ: ಅರ್ಜುನ, ಆಸಕ್ತಿಯಿಂದ ಕೇಳುತ್ತಿರುವ ನಿನ್ನ ಹಿತೈಷಿಯಾಗಿ ಯಾವ ಮಾತನ್ನು ನಾನು ಹೇಳುತ್ತೇನೋ ಆ ನನ್ನ ಉತ್ಕೃಷ್ಟವಾದ ಮಾತನ್ನು ಇನ್ನೂ ಕೇಳು.

ನ ಮೇ ವಿದುಃ ಸುರಗಣಾಃ
ಪ್ರಭವಂ ನ ಮಹರ್ಷಯಃ ।
ಅಹಮಾದಿರ್ಹಿ ದೇವಾನಾಂ
ಮಹರ್ಷೀಣಾಂ ಚ ಸರ್ವಶಃ ॥ ೨

ನನ್ನ ಸೃಷ್ಟಿಯ ಬಗೆಯನ್ನು ಯಾವ ದೇವತೆಗಳೂ ತಿಳಿಯರು. ಮಹರ್ಷಿಗಳೂ ತಿಳಿಯರು. ಏಕೆಂದರೆ ದೇವತೆಗಳಿಗೂ ಮಹರ್ಷಿಗಳಿಗೂ ಎಲ್ಲರಿಗೂ ಮೂಲಕಾರಣನು ನಾನೇ.

ಯೋ ಮಾಮಜಮನಾದಿಂ ಚ
ವೇತ್ತಿ ಲೋಕಮಹೇಶ್ವರಮ್ ।
ಅಸಮ್ಮೂಢಃ ಸ ಮರ್ತ್ಯೇಷು
ಸರ್ವಪಾಪೈಃ ಪ್ರಮುಚ್ಯತೇ ॥ ೩

ನನ್ನನ್ನು ಹುಟ್ಟಿಲ್ಲದವನೆಂದೂ, ಪ್ರಾಣತತ್ತ್ವಕ್ಕೂ ಕಾರಣನೆಂದೂ, ಜಗತ್ತಿಗೆಲ್ಲ ಹಿರಿಯ ಒಡೆಯನೆಂದೂ, ತಿಳಿಯುವವನು ಮನುಷ್ಯರಲ್ಲಿ ಮೋಹದೂರನಾಗಿ ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

ಬುದ್ಧಿರ್ಜ್ಞಾನಮಸಮ್ಮೋಹಃ
ಕ್ಷಮಾ ಸತ್ಯಂ ದಮಃ ಶಮಃ ।
ಸುಖಂ ದುಃಖಂ ಭವೋಽಭಾವೋ
ಭಯಂ ಚಾಭಯಮೇವ ಚ ॥ ೪

ಅಹಿಂಸಾ ಸಮತಾ ತುಷ್ಟಿಃ
ತಪೋ ದಾನಂ ಯಶೋಽಯಶಃ ।
ಭವಂತಿ ಭಾವಾ ಭೂತಾನಾಂ
ಮತ್ತ ಏವ ಪೃಥಗ್ವಿಧಾಃ ॥ ೫

ಕಾರ್ಯಾಕಾರ್ಯಗಳ ವಿವೇಕ, ತಿಳುವಳಿಕೆ, ಧರ್ಮದ ಎಚ್ಚರ, ಸ್ಮರಣೆ, ನಿಜವನ್ನಾಡುವುದು, ಇಂದ್ರಿಯಗಳನ್ನು ಬಿಗಿಹಿಡಿಯುವುದು, ಭಗವಂತನಲ್ಲಿ ನಿಷ್ಠೆ, ಸುಖ, ದುಃಖ, ಹುಟ್ಟು, ಸಾವು, ಭಯ ಮತ್ತು ಅಭಯ, ಅಹಿಂಸೆ, ಜೀವನದ ಏರುಪೇರುಗಳಲ್ಲಿ ಸಮದೃಷ್ಟಿ, ತೃಪ್ತಿ, ತಪಸ್ಸು, ದಾನ, ಕೀರ್ತಿ, ಅಪಕೀರ್ತಿ—ಈ ಎಲ್ಲ ಭಾವಗಳೂ ನನ್ನಿಂದಲೇ (ಅವರವರ ಕರ್ಮಕ್ಕೆ ತಕ್ಕಂತೆ)—ಪ್ರತ್ಯೇಕವಾಗಿ ಹುಟ್ಟುತ್ತವೆ.

ಮಹರ್ಷಯಃ ಸಪ್ತ ಪೂರ್ವೇ
ಚತ್ವಾರೋ ಮನವಸ್ತಥಾ ।
ಮದ್ಭಾವಾ ಮಾನಸಾ ಜಾತಾ
ಯೇಷಾಂ ಲೋಕ ಇಮಾಃ ಪ್ರಜಾಃ ॥ ೬

ಈ ಪ್ರಜೆಗಳೆಲ್ಲ ಯಾರ ಸೃಷ್ಟಿಯೋ ಆ ಮರೀಚಿ ಮೊದಲಾದ ಏಳು ಜನ ಮಹರ್ಷಿಗಳೂ, ಅದರಂತೆ ಪ್ರಾಚೀನರಾದ ಸ್ವಾಯಂಭುವ ಮುಂತಾದ ನಾಲ್ವರು ಮನುಗಳೂ, ಬ್ರಹ್ಮನ ಮಾನಸಪುತ್ರರಾಗಿ ನನ್ನಿಂದಲೇ ಹುಟ್ಟಿರುವರು.

ಏತಾಂ ವಿಭೂತಿಂ ಯೋಗಂ ಚ
ಮಮ ಯೋ ವೇತ್ತಿ ತತ್ತ್ವತಃ ।
ಸೋಽವಿಕಂಪೇನ ಯೋಗೇನ
ಯುಜ್ಯತೇ ನಾತ್ರ ಸಂಶಯಃ ॥ ೭

ನನ್ನ ಈ ಮಹಿಮಾವಿಶೇಷವನ್ನೂ ಸಾಮರ್ಥ್ಯವನ್ನೂ ಯಥಾವತ್ತಾಗಿ ಯಾವನು ತಿಳಿಯುತ್ತಾನೋ ಅವನು ಸ್ಥಿರವಾದ ಜ್ಞಾನಯೋಗವನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ.

ಅಹಂ ಸರ್ವಸ್ಯ ಪ್ರಭವೋ
ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ
ಬುಧಾ ಭಾವಸಮನ್ವಿತಾಃ ॥ ೮

ನಾನು ಎಲ್ಲರ ಹುಟ್ಟುವಿಕೆಗೂ ಕಾರಣನು ಮತ್ತು ಜಗತ್ತಿನ ಎಲ್ಲವೂ ನಡೆಯುವುದು ನನ್ನಿಂದ. ಹೀಗೆಂದು ತಿಳಿದು ಜ್ಞಾನಿಗಳು ಪ್ರೇಮದಿಂದ ನನ್ನನ್ನು ಭಜಿಸುತ್ತಾರೆ.

ಮಚ್ಚಿತ್ತಾ ಮದ್ಗತಪ್ರಾಣಾ
ಬೋಧಯಂತಃ ಪರಸ್ಪರಮ್ ।
ಕಥಯಂತಶ್ಚ ಮಾಂ ನಿತ್ಯಂ
ತುಷ್ಯಂತಿ ಚ ರಮಂತಿ ಚ ॥ ೯

ಮನಸ್ಸನ್ನು ನನ್ನಲ್ಲಿ ನೆಲೆಗೊಳಿಸಿ, ಎಲ್ಲ ಕರ್ಮವನ್ನೂ ನನ್ನಲ್ಲಿ ಅರ್ಪಿಸಿ, ಒಬ್ಬರಿಗೊಬ್ಬರು ಪರಸ್ಪರ ತಿಳುವಳಿಕೆ ನೀಡುತ್ತ, ನಿತ್ಯವೂ ನನ್ನ ಕಥೆಯನ್ನು ಹಾಡುತ್ತ ನೆಮ್ಮದಿಯಿಂದ ಸುಖವಾಗಿ ಬದುಕುವರು.



ತೇಷಾಂ ಸತತಯುಕ್ತಾನಾಂ
ಭಜತಾಂ ಪ್ರೀತಿಪೂರ್ವಕಮ್ ।
ದದಾಮಿ ಬುದ್ಧಿಯೋಗಂ ತಂ
ಯೇನ ಮಾಮುಪಯಾಂತಿ ತೇ ॥ ೧೦

ಯಾವಾಗಲೂ ನನ್ನಲ್ಲಿ ಮನಸ್ಸಿಟ್ಟು ಪ್ರೀತಿಯಿಂದ ಭಜಿಸುವ ಅಂಥವರಿಗೆ ನನ್ನನ್ನು ಸೇರಲು ಸಾಧ್ಯವಾಗುವಂತೆ ಜ್ಞಾನಯೋಗವನ್ನು ಕರುಣಿಸುತ್ತೇನೆ.

ತೇಷಾಮೇವಾನುಕಂಪಾರ್ಥಂ
ಅಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ
ಜ್ಞಾನದೀಪೇನ ಭಾಸ್ವತಾ ॥ ೧೧

ಅವರ ಮೇಲಿನ ಕನಿಕರದಿಂದಲೇ ನಾನು ಅವರ ಮನಸ್ಸಿನಲ್ಲಿದ್ದು ಬೆಳಗುವ ಜ್ಞಾನವೆಂಬ ದೀಪದಿಂದ ಅವರ ಬಗೆಯೊಳಗೆ ಕವಿದ ಅಜ್ಞಾನದ ಕತ್ತಲನ್ನು ಹೊಡೆದೋಡಿಸುತ್ತೇನೆ.

ಅರ್ಜುನ ಉವಾಚ—

ಪರಂ ಬ್ರಹ್ಮ ಪರಂ ಧಾಮ
ಪವಿತ್ರಂ ಪರಮಂ ಭವಾನ್ ।
ಪುರುಷಂ ಶಾಶ್ವತಂ ದಿವ್ಯಂ
ಆದಿದೇವಮಜಂ ವಿಭುಮ್ ॥ ೧೨

ಆಹುಸ್ತ್ವಾಮೃಷಯಃ ಸರ್ವೇ
ದೇವರ್ಷಿರ್ನಾರದಸ್ತಥಾ ।
ಅಸಿತೋ ದೇವಲೋ ವ್ಯಾಸಃ
ಸ್ವಯಂ ಚೈವ ಬ್ರವೀಷಿ ಮೇ ॥ ೧೩

ಅರ್ಜುನ: ನೀನೇ ಪರಬ್ರಹ್ಮ, ನೀನೇ ಹಿರಿಯ ಆಸರೆ, ನೀನೇ ಪರಮಪಾವನ ತತ್ತ್ವ. ಎಲ್ಲ ಋಷಿಗಳು, ದೇವರ್ಷಿಯಾದ ನಾರದ, ಮಹರ್ಷಿಗಳಾದ ಅಸಿತ ದೇವಲರು, ವೇದವ್ಯಾಸರು – ಎಲ್ಲರೂ ನಿನ್ನನ್ನು ಪರಮಪುರುಷನೆಂದೂ ಸನಾತನವಾದ ದಿವ್ಯ ತತ್ತ್ವವೆಂದೂ ದೇವತೆಗಳಿಗೂ ಮೊದಲಿಗನೆಂದೂ, ಹುಟ್ಟಿರದವನೆಂದೂ, ಬ ಹು ರೂ ಪ ತೊಟ್ಟಿರುವವನೆಂದೂ ಹೇಳುತ್ತಾರೆ. ನೀನು ಕೂಡ ಹೇಳುತ್ತಿರುವೆ.

ಸರ್ವಮೇತದೃತಂ ಮನ್ಯೇ
ಯನ್ಮಾಂ ವದಸಿ ಕೇಶವ ।
ನ ಹಿ ತೇ ಭಗವನ್ವ್ಯಕ್ತಿಂ
ವಿದುರ್ದೇವಾ ನ ದಾನವಾಃ ॥ ೧೪

ಕೃಷ್ಣ, ನೀನು ನನಗೆ ಹೇಳಿದ ಈ ಎಲ್ಲವೂ ನಿಜವೆಂದೂ ನಂಬಿದ್ದೇನೆ. ಆದ್ದರಿಂದಲೇ ಕೃಷ್ಣ, ನಿನ್ನ ಪ್ರಭಾವವನ್ನು ದೇ ವ ತೆ ಗ ಳೂ ತಿಳಿಯರು; ದಾನವರೂ ತಿಳಿಯರು.

ಸ್ವಯಮೇವಾತ್ಮನಾತ್ಮಾನಂ
ವೇತ್ಥ ತ್ವಂ ಪುರುಷೋತ್ತಮ ।
ಭೂತಭಾವನ ಭೂತೇಶ
ದೇವದೇವ ಜಗತ್ಪತೇ ॥ ೧೫

ಜಗತ್ತನ್ನು ಹುಟ್ಟಿಸುವವನೆ, ಜಗತ್ತಿನ ಒಡೆಯನೆ, ದೇವತೆಗಳ ದೇವನೆ, ಜಗತ್ತನ್ನು ಕಾಪಾಡುವ ಓ ಪುರುಷೋತ್ತಮನೆ, ನಿನ್ನ ಸ್ವರೂಪವನ್ನು ನೀನು ಮಾತ್ರವೇ ತಿಳಿದಿರುವೆ.

ವಕ್ತುಮರ್ಹಸ್ಯಶೇಷೇಣ
ದಿವ್ಯಾ ಹ್ಯಾತ್ಮವಿಭೂತಯಃ ।
ಯಾಭಿರ್ವಿಭೂತಿಭಿರ್ಲೋಕಾನ್
ಇಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬

ಯಾವ ಮಹಿಮೆಗಳಿಂದ ನೀನು ಈ ಲೋಕಗಳನ್ನು ತುಂಬಿಕೊಂಡಿದ್ದೀಯೋ ಆ ದಿವ್ಯವಾದ ನಿನ್ನ ಮಹಿಮಾವಿಶೇಷಗಳನ್ನು ಸಮಗ್ರವಾಗಿ ಹೇಳಬೇಕು.

ಕಥಂ ವಿದ್ಯಾಮಹಂ ಯೋಗಿನ್
ತ್ವಾಂ ಸದಾ ಪರಿಚಿಂತಯನ್ ।
ಕೇಷು ಕೇಷು ಚ ಭಾವೇಷು
ಚಿಂತ್ಯೋಽಸಿ ಭಗವನ್ಮಯಾ ॥ ೧೭

ಕೃಷ್ಣ, ನಾನು ನಿನ್ನನ್ನು ಯಾವಾಗಲೂ ಹೇಗೆ ಧ್ಯಾನಿಸುತ್ತ ತಿಳಿದೇನು ? ಯಾವ ಯಾವ ವಸ್ತುಗಳಲ್ಲಿ ನಾನು ನಿನ್ನನ್ನು ಧ್ಯಾನಿಸಬೇಕು.

ವಿಸ್ತರೇಣಾತ್ಮನೋ ಯೋಗಂ
ವಿಭೂತಿಂ ಚ ಜನಾರ್ದನ ।
ಭೂಯಃ ಕಥಯ ತೃಪ್ತಿರ್ಹಿ
ಶೃಣ್ವತೋ ನಾಸ್ತಿ ಮೇಽಮೃತಮ್ ॥ ೧೮

ಕೃಷ್ಣ, ನಿನ್ನ ಸಾಮರ್ಥ್ಯ ವಿಶೇಷವನ್ನೂ ಮಹಿಮಾ ವಿಶೇಷವನ್ನೂ ವಿವರವಾಗಿ ಮತ್ತೆ ಹೇಳು. ಏಕೆಂದರೆ ನಿನ್ನ ಅಮೃತದಂಥ ಮಾತನ್ನು ಕೇಳಿದಷ್ಟು ನನಗೆ ಸಾಕೆನಿಸುವುದಿಲ್ಲ.

ಶ್ರೀ ಭಗವಾನುವಾಚ—

ಹಂತ ತೇ ಕಥಯಿಷ್ಯಾಮಿ
ದಿವ್ಯಾಹ್ಯಾತ್ಮವಿಭೂತಯಃ ।

*Statement about ownership and other particulars about*

## SAPTHAGIRI
## (MONTHLY)

FORM IV
(*See Rule* 8)

| | | | |
|---|---|---|---|
| 1 | Place of publication | ... | TIRUPATI. |
| 2 | Periodicity of its publication | ... | Monthly |
| 3 | Honorary Editor | ... | Sri G. Kumaraswamy Reddy, I.A.S. Executive Officer, T.T.D. |
| 4 | Printer's Name<br>Whether citizen of India<br>Address | ...<br>..<br>... | Sri M. Vijayakumar Reddy, L.P.T.,<br>Yes<br>Manager, T.T.D. Printing Press, Tirupati. |
| 5 | Editor & Publisher's Name<br>Whether citizen of India<br>Address | ...<br>... | K. Subba Rao, M.A.,<br>Yes<br>Editor, Sapthagiri, T.T.D. Journal, Tirupati. |
| 6 | Names and addresses of individuals who own the Newspaper and partners or shareholders holding more than one per cent of the total capital. | ...<br>... | Board of Trustees represented by the Executive Officer on behalf of T. T. D., Tirupati. |

*I, K. Subba Rao, hereby declare that the particulars giver ve are true to the best of my knowledge and belief.*

**TIRUPATI,**
***Date* : 29-2-1983.**

**(*Sd.*) K. SUBBA RAO,**
*Signature of the Publisher.*

ಪ್ರಾಧಾನ್ಯತಃ ಕುರುಶ್ರೇಷ್ಠ
ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯

ಶ್ರೀಕೃಷ್ಣ : ಅರ್ಜುನ, ದಿವ್ಯವಾದ ನನ್ನ ಮಹಿಮಾವಿಶೇಷಗಳಲ್ಲಿ ಮುಖ್ಯವಾದುವುಗಳನ್ನು ನಿನಗೆ ಆರಿಸಿ ಹೇಳುತ್ತೇನೆ. ಏಕೆಂದರೆ ನನ್ನ ವೈಭವದ ವಿಸ್ತಾರಕ್ಕೆ ಕೊನೆಯಿಲ್ಲ.

ಅಹಮಾತ್ಮಾ ಗುಡಾಕೇಶ
ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ
ಭೂತಾನಾಮಂತ ಏವ ಚ ॥ ೨೦

ಅರ್ಜುನ, ನಾನು ಎಲ್ಲ ಪ್ರಾಣಿಗಳ ಹೃದಯದಲ್ಲಿರುವ ಅಂತರ್ಯಾಮಿಯು, ಎಲ್ಲ ಪ್ರಾಣಿಗಳಿಗೂ ಮೊದಲು ನಡುವೆಯೂ ಕೊನೆಯೂ ನಾನೇ.

ಆದಿತ್ಯಾನಾಮಹಂ ವಿಷ್ಣುಃ
ಜ್ಯೋತಿಷಾಂ ರವಿರಂಶುಮಾನ್ ।
ಮರೀಚಿರ್ಮರುತಾಮಸ್ಮಿ
ನಕ್ಷತ್ರಾಣಾಮಹಂ ಶಶೀ ॥ ೨೧

ನಾನು ಆದಿತ್ಯರಲ್ಲಿ ವಿಷ್ಣು ; ಬೆಳಗುವ ವಸ್ತುಗಳಲ್ಲಿ ಕಿರಣಗಳುಳ್ಳ ಸೂರ್ಯ ; ಮರುತ್ತುಗಳಲ್ಲಿ ಮರೀಚಿ ; ನಕ್ಷತ್ರಗಳಲ್ಲಿ ಚಂದ್ರ.

ವೇದಾನಾಂ ಸಾಮವೇದೋಽಸ್ಮಿ
ದೇವಾನಾಮಸ್ಮಿ ವಾಸವಃ ।
ಇಂದ್ರಿಯಾಣಾಂ ಮನಶ್ಚಾಸ್ಮಿ
ಭೂತಾನಾಮಸ್ಮಿ ಚೇತನಾ ॥ ೨೨

ವೇದಗಳಲ್ಲಿ ಸಾಮವೇದವಾಗಿದ್ದೇನೆ. ದೇವತೆಗಳಲ್ಲಿ ಇಂದ್ರನಾಗಿದ್ದೇನೆ. ಇಂದ್ರಿಯಗಳಲ್ಲಿ ಮನಸ್ಸಾಗಿದ್ದೇನೆ. ಪ್ರಾಣಿಗಳಲ್ಲಿ ಚೈತನ್ಯನಾಗಿದ್ದೇನೆ.

ರುದ್ರಾಣಾಂ ಶಂಕರಶ್ಚಾಸ್ಮಿ
ವಿತ್ತೇಶೋ ಯಕ್ಷರಕ್ಷಸಾಮ್ ।
ವಸೂನಾಂ ಪಾವಕಶ್ಚಾಸ್ಮಿ
ಮೇರುಃ ಶಿಖರಿಣಾಮಹಮ್ ॥ ೨೩

ರುದ್ರರಲ್ಲಿ ಶಂಕರನಾಗಿದ್ದೇನೆ. ಯಕ್ಷರಲ್ಲಿ ಕುಬೇರನಾಗಿದ್ದೇನೆ. ವಸುಗಳಲ್ಲಿ ಅಗ್ನಿಯಾಗಿದ್ದೇನೆ. ಪರ್ವತಗಳಲ್ಲಿ ಮೇರು ನಾನು.

ಪುರೋಧಸಾಂ ಚ ಮುಖ್ಯಂ
ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।
ಸೇನಾನೀನಾಮಹಂ ಸ್ಕಂದಃ
ಸರಸಾಮಸ್ಮಿ ಸಾಗರಃ ॥ ೨೪

ಅರ್ಜುನ, ಪುರೋಹಿತರುಗಳಲ್ಲಿ ಶ್ರೇಷ್ಠನಾದ ಬೃಹಸ್ಪತಿಯನ್ನು ನನ್ನನ್ನಾಗಿ ತಿಳಿ. ಸೇನಾಪತಿಗಳಲ್ಲಿ ಕುಮಾರಸ್ವಾಮಿಯು ನಾನು. ಸರೋವರಗಳಲ್ಲಿ ಸಾಗರವಾಗಿದ್ದೇನೆ.

ಮಹರ್ಷೀಣಾಂ ಭೃಗುರಹಂ
ಗಿರಾಮಸ್ಮ್ಯೇಕಮಕ್ಷರಮ್ ।
ಯಜ್ಞಾನಾಂ ಜಪಯಜ್ಞೋಽಸ್ಮಿ
ಸ್ಥಾವರಾಣಾಂ ಹಿಮಾಲಯಃ ॥ ೨೫

ಮಹರ್ಷಿಗಳಲ್ಲಿ ಭೃಗು ನಾನು. ಮಾತುಗಳಲ್ಲಿ ಒಂದಕ್ಷರವಾದ ಓಂಕಾರವಾಗಿದ್ದೇನೆ. ಯಜ್ಞಗಳಲ್ಲಿ ಜಪರೂಪವಾದ ಯಜ್ಞವಾಗಿದ್ದೇನೆ. ಅಲ್ಲಾಡದ ವಸ್ತುಗಳಲ್ಲಿ ಹಿಮಾಲಯವಾಗಿದ್ದೇನೆ.

ಅಶ್ವತ್ಥಃ ಸರ್ವವೃಕ್ಷಾಣಾಂ
ದೇವರ್ಷೀಣಾಂ ಚ ನಾರದಃ ।
ಗಂಧರ್ವಾಣಾಂ ಚಿತ್ರರಥಃ
ಸಿದ್ಧಾನಾಂ ಕಪಿಲೋ ಮುನಿಃ ॥ ೨೬

ಮರಗಳಲ್ಲೆಲ್ಲ ಅರಳಿ ಮರ, ದೇವರ್ಷಿಗಳಲ್ಲಿ ನಾರದ, ಗಂಧರ್ವರಲ್ಲಿ ಚಿತ್ರರಥ, ಸಿದ್ಧರಲ್ಲಿ ಕಪಿಲ ಮುನಿಯಾಗಿದ್ದೇನೆ.

ಉಚ್ಚೈಃಶ್ರವಸಮಶ್ವಾನಾಂ
ವಿದ್ಧಿ ಮಾಮಮೃತೋದ್ಭವಮ್ ।
ಐರಾವತಂ ಗಜೇಂದ್ರಾಣಾಂ
ನರಾಣಾಂ ಚ ನರಾಧಿಪಮ್ ॥ ೨೭

ಕುದುರೆಗಳಲ್ಲಿ ಹಾಲಿನ ಸಮುದ್ರದಲ್ಲಿ ಹುಟ್ಟಿದ ಉಚ್ಚೈಶ್ರವಸ್ಸನ್ನು ನನ್ನನ್ನಾಗಿ ತಿಳಿ. ಆನೆಗಳಲ್ಲೆಲ್ಲ ಐರಾವತ, ಮನುಷ್ಯರಲ್ಲೆಲ್ಲ ಅರಸ.

ಆಯುಧಾನಾಮಹಂ ವಜ್ರಂ
ಧೇನೂನಾಮಸ್ಮಿ ಕಾಮಧುಕ್ ।
ಪ್ರಜನಶ್ಚಾಸ್ಮಿ ಕಂದರ್ಪಃ
ಸರ್ಪಾಣಾಮಸ್ಮಿ ವಾಸುಕಿಃ ॥ ೨೮

ಆಯುಧಗಳಲ್ಲಿ ವಜ್ರಾಯುಧವು ನಾನು. ಆಕಳುಗಳಲ್ಲಿ ಕಾಮಧೇನುವಾಗಿದ್ದೇನೆ. ಸಂತತಿಯನ್ನುಂಟುಮಾಡುವಂಥ ಕಾಮನಾಗಿದ್ದೇನೆ. ಸರ್ಪಗಳಲ್ಲಿ ವಾಸುಕಿಯಾಗಿದ್ದೇನೆ.

ಅನಂತಶ್ಚಾಸ್ಮಿ ನಾಗಾನಾಂ
ವರುಣೋ ಯಾದಸಾಮಹಮ್ ।
ಪಿತೄಣಾಮರ್ಯಮಾ ಚಾಸ್ಮಿ
ಯಮಃ ಸಂಯಮತಾಮಹಮ್ ॥ ೨೯

ವಿಷವಿಲ್ಲದ ಹಾವುಗಳಲ್ಲಿ ಅನಂತನಾಗಿದ್ದೇನೆ. ನೀರಿನಲ್ಲಿರುವ ಪ್ರಾಣಿಗಳಲ್ಲಿ ವರುಣನು ನಾನು. ಪಿತೃದೇವತೆಗಳಲ್ಲಿ ಅರ್ಯಮನಾಗಿದ್ದೇನೆ. ನಿಯಮಿಸುವವರಲ್ಲಿ ಯಮನು ನಾನು.

ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ
ಕಾಲಃ ಕಲಯತಾಮಹಮ್ ।
ಮೃಗಾಣಾಂ ಚ ಮೃಗೇಂದ್ರೋಽಹಂ
ವೈನತೇಯಶ್ಚ ಪಕ್ಷಿಣಾಮ್ ॥ ೩೦

ದೈತ್ಯರಲ್ಲಿ ಪ್ರಹ್ಲಾದನಾಗಿದ್ದೇನೆ. ಲೆಕ್ಕಮಾಡುವವರಲ್ಲಿ ಕಾಲವು ನಾನು. ಮೃಗಗಳೊಳಗೆ ಸಿಂಹವು ನಾನು. ಹಕ್ಕಿಗಳೊಳಗೆ ಗರುಡ.

ಪವನಃ ಪವತಾಮಸ್ಮಿ
ರಾಮಃ ಶಸ್ತ್ರಭೃತಾಮಹಮ್ ।
ಝಷಾಣಾಂ ಮಕರಶ್ಚಾಸ್ಮಿ
ಸ್ರೋತಸಾಮಸ್ಮಿ ಜಾಹ್ನವೀ ॥ ೩೧

ವೇಗವುಳ್ಳವುಗಳಲ್ಲಿ ವಾಯುವಾಗಿದ್ದೇನೆ. ಶಸ್ತ್ರವನ್ನು ಹಿಡಿದವರಲ್ಲಿ ರಾಮಚಂದ್ರನು ನಾನು. ಮೀನುಗಳಲ್ಲಿ ಮೊಸಳೆಯಾಗಿದ್ದೇನೆ. ಹರಿಯುವ ನದಿಗಳಲ್ಲಿ ಗಂಗಾನದಿಯಾಗಿದ್ದೇನೆ.

ಸರ್ಗಾಣಾಮಾದಿರಂತಶ್ಚ
ಮಧ್ಯಂ ಚೈವಾಹಮರ್ಜುನ ।
ಅಧ್ಯಾತ್ಮವಿದ್ಯಾ ವಿದ್ಯಾನಾಂ
ವಾದಃ ಪ್ರವದತಾಮಹಮ್ ॥ ೩೨

ಅರ್ಜುನ, ಎಲ್ಲ ಸೃಷ್ಟಿಗಳ ಮೊದಲೂ ಕೊನೆಯೂ ನಡುವೆಯೂ ನಾನು. ವಿದ್ಯೆಗಳಲ್ಲಿ ಆತ್ಮವಿದ್ಯೆ ನಾನು. ವಾದಿಗಳ ವಾದಶಕ್ತಿ ನಾನು.

ಅಕ್ಷರಾಣಾಮಕಾರೋಽಸ್ಮಿ
ದ್ವಂದ್ವಃ ಸಾಮಾಸಿಕಸ್ಯ ಚ ।
ಅಹಮೇವಾಕ್ಷಯಃ ಕಾಲೋ
ಧಾತಾಽಹಂ ವಿಶ್ವತೋಮುಖಃ ॥ ೩೩

ಅಕ್ಷರಗಳಲ್ಲಿ ಅಕಾರವಾಗಿದ್ದೇನೆ. ಸಮಾಸಗಳಲ್ಲೆಲ್ಲ ದ್ವಂದ್ವ. ಎಂದಿಗೂ ನಾಶವಾಗದ ಕಾಲವು ನಾನೆ. ಎಲ್ಲ ಕಡೆಗೂ ಮುಖಗಳುಳ್ಳವನಾಗಿ ಎಲ್ಲವನ್ನೂ ಧರಿಸಿದವನು ನಾನು.

ಮೃತ್ಯುಃ ಸರ್ವಹರಶ್ಚಾಹಮ್
ಉದ್ಭವಶ್ಚ ಭವಿಷ್ಯತಾಮ್ ।
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ
ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥ ೩೪

ಎಲ್ಲವನ್ನು ಕಸಿದುಕೊಳ್ಳುವ ಮೃತ್ಯುವು ನಾನು. ಮುಂದೆ ಏಳಿಗೆಗೆ ಬರುವವರಲ್ಲಿ ಏಳಿಗೆ, ಸ್ತ್ರೀಯರಲ್ಲಿ ಒಳ್ಳೆ ಹೆಸರು, ಕಾಂತಿ, ಮಾತುಗಾರಿಕೆ ನಾನು. ನೆನಪು, ಮೇಧಾಶಕ್ತಿ ಮನೋನಿಗ್ರಹ ಮತ್ತು ತಾಳ್ಮೆ ನಾನು.

ಬೃಹತ್ಸಾಮ ತಥಾ ಸಾಮ್ನಾಂ
ಗಾಯತ್ರೀ ಛಂದಸಾಮಹಮ್ ।
ಮಾಸಾನಾಂ ಮಾರ್ಗಶೀರ್ಷೋಽಹಂ
ಋತೂನಾಂ ಕುಸುಮಾಕರಃ ॥ ೩೫

ಹಾಗೆಯೇ ಸಾಮಗಳಲ್ಲಿ ಬೃಹತ್ಸಾಮ. ಛಂದಸ್ಸುಗಳಲ್ಲಿ ಗಾಯತ್ರಿ ನಾನು. ತಿಂಗಳುಗಳಲ್ಲಿ ಮಾರ್ಗಶಿರ ನಾನು. ಋತುಗಳಲ್ಲಿ ವಸಂತಋತು.

ದ್ಯೂತಂ ಛಲಯತಾಮಸ್ಮಿ
ತೇಜಸ್ತೇಜಸ್ವಿನಾಮಹಮ್ ।
ಜಯೋಽಸ್ಮಿ ವ್ಯವಸಾಯೋಽಸ್ಮಿ
ಸತ್ತ್ವಂ ಸತ್ತ್ವವತಾಮಹಮ್ ॥ ೩೬

ಜೂಜಾಡುವವರಲ್ಲಿ ಜೂಜಾಗಿದ್ದೇನೆ. ತೇಜಸ್ವಿಗಳ ತೇಜಸ್ಸು ನಾನು. ಗೆಲುವಿನ ರೂಪವಾಗಿದ್ದೇನೆ. ಉದ್ಯೋಗದ ರೂಪವಾಗಿದ್ದೇನೆ. ಸಾತ್ತ್ವಿಕರಲ್ಲಿ ಸತ್ವಗುಣವು ನಾನು.

ವೃಷ್ಣೀನಾಂ ವಾಸುದೇವೋಽಸ್ಮಿ
ಪಾಂಡವಾನಾಂ ಧನಂಜಯಃ ।
ಮುನೀನಾಮಪ್ಯಹಂ ವ್ಯಾಸಃ
ಕವೀನಾಮುಶನಾ ಕವಿಃ ॥ ೩೭

ಯಾದವರಲ್ಲಿ ಕೃಷ್ಣನಾಗಿದ್ದೇನೆ. ಪಾಂಡವರಲ್ಲಿ ಅರ್ಜುನ, ಮುನಿಗಳಲ್ಲಿ ವ್ಯಾಸನು. ಕವಿಗಳಲ್ಲಿ ಶುಕ್ರಾಚಾರ್ಯನೆಂಬ ಕವಿ.

ದಂಡೋ ದಮಯತಾಮಸ್ಮಿ
ನೀತಿರಸ್ಮಿ ಜಿಗೀಷತಾಮ್ ।
ಮೌನಂ ಚೈವಾಸ್ಮಿ ಗುಹ್ಯಾನಾಂ
ಜ್ಞಾನಂ ಜ್ಞಾನವತಾಮಹಮ್ ॥ ೩೮

ಶಿಕ್ಷಿಸುವವರಲ್ಲಿ ದಂಡನೀತಿಯಾಗಿದ್ದೇನೆ. ಗೆಲ್ಲಬೇಕೆನ್ನುವವರಲ್ಲಿ ನೀತಿಯಾಗಿದ್ದೇನೆ. ಗುಟ್ಟಾಗಿರುವವುಗಳಲ್ಲಿ ಮಾತಾಡದಿರುವಿಕೆಯಾಗಿದ್ದೇನೆ. ಜ್ಞಾನಿಗಳ ಆತ್ಮಜ್ಞಾನ ನಾನು.

ಯಚ್ಚಾಪಿ ಸರ್ವಭೂತಾನಾಂ
ಬೀಜಂ ತದಹಮರ್ಜುನ ।
ನ ತದಸ್ತಿ ವಿನಾ ಯತ್ ಸ್ಯಾತ್
ಮಯಾ ಭೂತಂ ಚರಾಚರಮ್ ॥ ೩೯

ಅರ್ಜುನ, ಎಲ್ಲ ಚರಾಚರಕ್ಕೆ ಯಾವುದು ಕಾರಣವೋ ಅದು ನಾನು. ಈ ಚರಾಚರ ವಿಶ್ವದಲ್ಲಿ ನಾನಿರದ ವಸ್ತುವೇ ಇಲ್ಲ.

ನಾಂತೋಽಸ್ತಿ ಮಮ ದಿವ್ಯಾನಾಂ
ವಿಭೂತೀನಾಂ ಪರಂತಪ ।
ಏಷ ತೂದ್ದೇಶತಃ ಪ್ರೋಕ್ತೋ
ವಿಭೂತೇರ್ವಿಸ್ತರೋ ಮಯಾ ॥ ೪೦

ಅರ್ಜುನ, ನನ್ನ ದಿವ್ಯವಾದ ಮಹಿಮೆಗಳಿಗೆ ಕೊನೆ ಇಲ್ಲ. ಮಹಿಮೆಯ ವಿಸ್ತಾರದ ಕೆಲವಂಶವನ್ನು ಇಲ್ಲಿ ಹೆಸರಿಸಿ ಹೇಳಿದ್ದೇನೆ.

ಯದ್ಯದ್ವಿಭೂತಿಮತ್ಸತ್ತ್ವಂ
ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ
ಮಮ ತೇಜೋಽಂಶಸಂಭವಮ್ ॥ ೪೧

ಯಾವುದು ಹೆಚ್ಚುಗಾರಿಕೆಯಿಂದ ಕೂಡಿದೆಯೋ ಕಾಂತಿಯಿಂದ ಕೂಡಿದೆಯೋ ಹೆಚ್ಚು ಬಲದಿಂದ ಕೂಡಿದೆಯೋ ಅದನ್ನು ನನ್ನ ಮಹಿಮೆಯ ಅಂಶದಿಂದ ಹುಟ್ಟಿದ್ದೆಂದು ನೀನು ತಿಳಿ.

ಅಥವಾ ಬಹುನೈತೇನ ಕಿಂ
ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನಂ
ಏಕಾಂಶೇನ ಸ್ಥಿತೋ ಜಗತ್ ॥ ೪೨

ಅಥವಾ ಈ ವಿವರಗಳನ್ನೆಲ್ಲ ತಿಳಿಯಬೇಕಾದ ಮಾತು ಇದು ; ಈ ಎಲ್ಲವನ್ನೂ ನನ್ನ ಶಕ್ತಿಯ ಒಂದಂಶದಿಂದ ತುಂಬಿಕೊಂಡು ನಾನು ಜಗತ್ತಿನಲ್ಲಿ ವ್ಯಾಪಿಸಿರುವೆನು.

ಇತಿ

ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೆ ಧ್ಯಾನಯೋಗೋ
ನಾಮ ದಶಮೋಽಧ್ಯಾಯಃ ॥

೧೦ ನೆಯ ಅಧ್ಯಾಯವು ಮುಗಿದುದು

# ಶ್ರೀ ಕೃಷ್ಣ ದ್ವಾರಕಾ



ಗುಜರಾತ್‌ರಾಜ್ಯದ ಓಖಾಮಂಡಲವು ಪರಮಪವಿತ್ರವಾದ ನೆಲವೆಂದೆನಿಸಿಕೊಂಡಿದೆ. ಇಲ್ಲಿರುವ ಜಗತ್‌ಪ್ರಸಿದ್ಧ ಖಾತೇವಾಡದ ಸೋಮನಾಥ ಹಾಗೂ ಶ್ರೀಕೃಷ್ಣ ದ್ವಾರಕಾ, ಅದರ ಸಮೀಪದಲ್ಲಿರುವ ದೇಹೋತ್ಸರ್ಗ, ಗಿರಿನಾರ್ ಪರ್ವತ ಮತ್ತು ಪೋರ್‌ಬಂದರ್— ಇವೇ ಮೊದಲಾದ ಸ್ಥಳಗಳು ಲಕ್ಷೋಪಲಕ್ಷ ಯಾತ್ರಿಕರನ್ನು ತಮ್ಮೆಡೆಗೆ ಸೆಳೆಯುತ್ತಲಿವೆ.

ನಮ್ಮ ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಈ ಕ್ಷೇತ್ರಗಳನ್ನು ಕುರಿತು ಹೀಗೆ ಹೇಳಿದ್ದಾರೆ.

ಅಯೋಧ್ಯಾ ಮಥುರಾ ಮಾಯಾ  
ಕಾಶೀ ಕಾಂಚೀ ಅವಂತಿಕಾ  
ಪುರೀ ದ್ವಾರಾವತೀ ಚೈವ  
ಸಪ್ತೈತೇ ಮೋಕ್ಷದಾಯಿಕಾಃ

ಈ ಮೋಕ್ಷಪ್ರದಾಯಕವಾದ ಪುಣ್ಯಸ್ಥಳಗಳಲ್ಲಿ ದ್ವಾರಕಾನಗರವೂ ಸಹ ಒಂದು ಎಂದು ಹೇಳಲಾಗಿದೆ, ಅಲ್ಲದೆ ಚತುರ್ಧಾಮ ಯಾತ್ರಾ-ಎಂಬ ಯಾತ್ರೆಯಲ್ಲಿ ಈ ದ್ವಾರಕಾ ನಗರವೂ ಸಹ ಒಂದು ಎಂದೆನಿಸಿಕೊಂಡಿದೆ. ಭಾರತೀಯ ದರ್ಶನಾಚಾರ್ಯರಲ್ಲಿ ಅಗ್ರಗಣ್ಯರಾದ ಶಂಕರಭಗವತ್ಪಾದರು ಭಾರತದ ಉದ್ದಗಲಕ್ಕೂ ನಾಲ್ಕು ಧರ್ಮಪೀಠಗಳನ್ನು ಸ್ಥಾಪನೆ ಮಾಡಿದರು, ಅವುಗಳನ್ನು ಚತುರಾಮ್ನಾಯ ಪೀಠಗಳೆಂದು ಕರೆಯುವುದುಂಟು. ಹೀಗೆ ಚತುರಾಮ್ನಾಯ ಪೀಠದಲ್ಲಿ ದ್ವಾರಕಾನಗರದಲ್ಲಿರುವ ಶಾಖೆಯೂ ಸಹ ಒಂದು ಎಂದು ಗಣಿಸಲಾಗುತ್ತದೆ. ಇಲ್ಲಿರುವ ಪೀಠಕ್ಕೆ ಬಹುಕಾಲ ಶೃಂಗೇರಿಯ ಸಮೀಪದಲ್ಲಿರುವ ಮುಳಬಾಗಿಲು ಮಠದ ಯತಿಗಳೇ ಪೀಠಾಧೀಶ್ವರರಾಗಿದ್ದುದು ಕನ್ನಡಿಗರಿಗೆ ಹೆಮ್ಮೆ ತರುವ ವಿಷಯವೆಂದೆನಿಸಿಕೊಂಡಿದೆ.

ಪ್ರಾಚೀನ ಭಾರತದಲ್ಲಿ ಈಜಿಪ್ಟ್, ಅರಬಸ್ಥಾನ್, ಮೆಸಪಟೋಮಿಯ ಮೊದಲಾದ ಸ್ಥಳಗಳಿಗೆ ಭಾರತದ ವಾಯುವ್ಯ ದಿಕ್ಕಿನಿಂದ ಪ್ರಯಾಣ ಮಾಡುತ್ತಿದ್ದ ವ್ಯಾಪಾರೀ ಹಡಗುಗಳು ಈ ದ್ವಾರಕಾ ಸಮುದ್ರದ ಭಾಗದಿಂದಲೇ ತಮ್ಮ ಪ್ರಯಾಣವನ್ನು ಬೆಳೆಸುತ್ತಿದ್ದವು. ಆದುದರಿಂದಲೇ ಈ ಸ್ಥಳವನ್ನು ದ್ವಾರ್ ಎಂದು ಕರೆಯುತ್ತಿದ್ದರು. ಇದು ಸಂಸ್ಕೃತ ಮೂಲದಿಂದ ಬಂದ ಶಬ್ದವಾಗಿದ್ದು ಕಾಲಾಂತರದಲ್ಲಿ ಈ ಭಾಗವನ್ನು ದ್ವಾರಕಾ ಎಂದು ಕರೆಯುವುದು ರೂಢಿಯಲ್ಲಿ ಬಂದಿತು.

ಓಖಾಮಂಡಲದ ಬಹುಭಾಗವೆಲ್ಲಾ ಸಮುದ್ರದಂಡೆಗುಂಟಾ ವ್ಯಾಪಿಸಿಕೊಂಡಿದೆ. ಆದುದರಿಂದ ಜನ ತಮ್ಮ ವ್ಯಾಪಾರೀವೃತ್ತಿಯನ್ನು ಬೆಳೆಸಿಕೊಂಡರು. ಆದುದರಿಂದ ಬಹು ಪ್ರಾಚೀನಕಾಲದಿಂದಲೂ ಇಲ್ಲಿ ವಾಸಿಸುವ ಪ್ರಜೆಗಳು ಬೇರೆ ಬೇರೆ ರಾಷ್ಟ್ರಗಳೊಂದಿಗೆ ಸಂಪರ್ಕವನ್ನು ಬೆಳೆಸಿ ವ್ಯಾಪಾರ, ವ್ಯವಹಾರಗಳ ಸಂಬಂಧವನ್ನು ಇಟ್ಟುಕೊಂಡು ಬಂದವರೆಂದು ತಿಳಿದು ಬರುತ್ತದೆ. ಹೀಗಾಗಿ ಈ ಭಾಗವು ಬಹು ಸಂಪದ್ಭರಿತವಾದ ಹಾಗೂ ನವ ನಾಗರಿಕತೆಯಿಂದ ಕೂಡಿದ ನಾಡೆಂದು ಕರೆಸಿಕೊಳ್ಳುವಂತಾಯಿತು.

ಶ್ರೀಕೃಷ್ಣನು ತನ್ನವರ ಮೇಲೆ ಜರಾಸಂಧನಿಂದಾಗುತ್ತಿದ್ದ ಧಾಳಿಯಿಂದ ಪಾರಾಗಲು, ಬಲವನ್ನು, ಕುಲವನ್ನು, ರಕ್ಷಿಸಿಕೊಳ್ಳುವುದಕ್ಕಾಗಿ ಯಮುನಾತೀರದ ಮಥುರಾ ಹಾಗೂ ವೃಂದಾವನಗಳಿಂದ ಆ ಜನವನ್ನು ಹೊರಡಿಸಿಕೊಂಡು ದೂರದ ನೆಲವಾದ ಓಖಾ ಮಂಡಲಕ್ಕೆ ಬಂದು ಸಂಗಡಿಗರೆಲ್ಲರ ಸಹಾಯದಿಂದ ವೈಭವೋಪೇತವಾದ ದ್ವಾರಕಾನಗರವನ್ನು ಸೃಷ್ಟಿ ಮಾಡಿದ. ಯಾದವರ ಕುಲವು ಈ ಭಾಗಕ್ಕೆ ಬಂದ ನಂತರ ಸಮಗ್ರ ಓಖಾಮಂಡಲವು ವ್ಯಾಪಾರ ವ್ಯವಹಾರ ನಿಮಿತ್ತದಿಂದಾಗಿ ಬಹು ಬೇಗನೆ ಸಂಪದ್ಭರಿತವಾಗಿ ಬೆಳೆದು ಬರುವಂತಾಯಿತು. ದ್ವಾರಕಾನಗರದ ಜನಜೀವನ, ಸಂಪತ್ತು, ವೈಭವ ಇವುಗಳ ಆಳವನ್ನು ತಿಳಿಯಬೇಕಾದಲ್ಲಿ ನಾವು ಮಹಾಭಾರತ ಹಾಗೂ ಭಾಗವತಾದಿ ಗ್ರಂಥಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ. ಅಂದು ಶ್ರೀಕೃಷ್ಣನ ಜೀವಿತಾವಧಿಯಲ್ಲಿ ನಡೆಯಿತೆಂದು ಹೇಳುವ ಶ್ಯಮಂತಕ ಮಣಿಯ ಹಗರಣವಂತೂ ದ್ವಾರಕಾನಗರದ ಶ್ರೀಮಂತಿಕೆಯ ದ್ಯೋತಕವಾಗಿ ಇಂದಿಗೂ ಕಥಾರೂಪದಲ್ಲಿ ಮನೆ ಮನೆಗಳಲ್ಲಿ ಕೇಳಿ ಬರುವಂತಾಗಿದೆ.

ಭಾರತೀಯ ಸಂಸ್ಕೃತ ಸಾಹಿತ್ಯದಲ್ಲಿ ಶ್ರೀ ಕೃಷ್ಣ ಎಂಬ ಹೆಸರಿನ ಉಲ್ಲೇಖವಂತೂ ಸಾಕಷ್ಟು ಪ್ರಮಾಣದಲ್ಲಿ ನಮಗೆ ಕಾಣಸಿಗುತ್ತದೆ. ಋಗ್ವೇದದ ಕೌಶೀತಕೀ ಬ್ರಾಹ್ಮಣದಲ್ಲಿ, ಐತರೇಯರ ಅರಣ್ಯಕದಲ್ಲಿ ಛಾಂದೋಗ್ಯ ಉಪನಿಷತ್ತಿನಲ್ಲಿ ಶ್ರೀಕೃಷ್ಣನ ಹೆಸರನ್ನು ನಾವು ನೋಡಬಹುದಾಗಿದೆ. ಮಹಾಭಾರತದಲ್ಲಿ ಕಾಣಸಿಗುವ ಕೃಷ್ಣ

**ಶ್ರೀ ಆದ್ಯ ರಾಮಾಚಾರ್ಯ**

ನಂತೂ ತಾನು ವೃಷ್ಣಿಕುಲದವನೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಕ್ರಿ. ಪೂ. ಎಂಟನೆಯ ಶತಮಾನದಲ್ಲಿಯೇ ಶ್ರೀಕೃಷ್ಣ ಹಾಗೂ ಅರ್ಜುನ ಇವರಿಬ್ಬರೂ ಪೂಜಾರ್ಹ ವ್ಯಕ್ತಿಗಳಾಗಿದ್ದರೆಂದು ತಿಳಿದುಬರುತ್ತದೆ. ಗ್ರೀಕ್ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸ್ ಎಂಬ ಪ್ರವಾಸಿಯು ಕ್ರಿ. ಪೂ. ಐದನೆಯ ಶತಮಾನದಲ್ಲಿಯೇ ಶ್ರೀಕೃಷ್ಣನು ಭಾರತದಲ್ಲಿ ಪೂಜೆಗೊಳ್ಳುತ್ತಿದ್ದನೆಂಬ ಮಾತನ್ನು ಹೇಳಿದ್ದಾನೆ. ಅಲ್ಲದೆ ನರ ನಾರಾಯಣ ರೂಪದಲ್ಲಿ ಕೃಷ್ಣಾರ್ಜುನರು ಪೂಜೆಗೊಳ್ಳುತ್ತಿದ್ದರೆಂಬ ಬಗ್ಗೆ ಮಧ್ಯ ಪ್ರದೇಶದಲ್ಲಿ ಗುಪ್ತರಕಾಲದಲ್ಲಿ ರಚಿತವಾಗಿದ್ದ ವಿಷ್ಣುದೇವಾಲಯದಲ್ಲಿ ದೊರೆಯುವ ಶಿಲ್ಪಗಳಿಂದ ನಾವು ಊಹಿಸಬಹುದಾಗಿದೆ.

ಈ ಎಲ್ಲ ವಿಷಯಗಳನ್ನು ಅಭ್ಯಾಸ ಮಾಡಿದಂತೆಲ್ಲಾ ಐತಿಹಾಸಿಕ ವ್ಯಕ್ತಿಯೊಬ್ಬನನ್ನು ದೇವತಾಂಶದಲ್ಲಿಟ್ಟು ಪೂಜಿಸುತ್ತ ಬಂದದ್ದೇಕೆ ಎಂಬ ವಿಷಯವು ಚಿಕಿತ್ಸಕ ಮನೋಭಾವದವರನ್ನು ಕಾಡುವುದು ಸಹಜವೆಂದೆನಿಸುತ್ತದೆ. ಆದರೆ ಈ ಮಹಾನುಭಾವನು ತನ್ನ ಜೀವಿತಕಾಲದಲ್ಲಿ ಮಾಡಿದ ಕಾರ್ಯಗಳನ್ನು ಕುರಿತು ಅಭ್ಯಾಸ ಮಾಡುತ್ತಾ ಹೋದಂತೆಲ್ಲಾ ಆತನ ವಿಚಾರವಾಗಿ ನಮ್ಮ ಹೃದಯದಲ್ಲಡಕವಾದ ಅಜ್ಞಾನದ ಕತ್ತಲೆಯು ತಾನೇ ತಾನಾಗಿ ದೂರಾಗಿಹೋಗುತ್ತದೆ. ಈ ಮಹಾನುಭಾವನು ದ್ವಾಪರಯುಗದಲ್ಲಿ ಬೆಳೆದು ನಿಂತಿದ್ದ ಅನೇಕ ಗುಂಪುಗಳನ್ನು ಹೊಡೆದೋಡಿಸಿ ಧರ್ಮಸ್ಥಾಪನೆಗಾಗಿ ಕಂಕಣಬದ್ಧನಾಗಿ ನಿಂತ. ನಮ್ಮ ಬಾಳು ಪರಿಣಾಮಕಾರಿಯಾಗಬೇಕಾಗಿದ್ದಲ್ಲಿ ಅದು ಧರ್ಮಶ್ರದ್ಧೆಯಿಂದ ಮಾತ್ರ ಸಾಧ್ಯ ಎಂಬ ಮಾತನ್ನು ಸ್ಪಷ್ಟವಾಗಿ ಸಾರಿದ. ‘ಯಾರು ಧರ್ಮವನ್ನು ರಕ್ಷಿಸುತ್ತಾರೆಯೋ ಅಂತಹವರನ್ನು ಧರ್ಮವು ರಕ್ಷಿಸುತ್ತದೆ’ ಎಂಬ ಮಾತನ್ನು ಸಿದ್ಧಪಡಿಸಿ ತೋರಿಸಿದ. ಅವನ ಈ ವಿಚಾರಗಳು ಜ್ಞಾನಿಗಳಿಗೂ, ಹಿರಿಯರಿಗೂ, ತಪಸ್ವಿಗಳಿಗೂ ಮನ ಮುಟ್ಟುವಂತಾಯಿತು. ದುರ್ಜನರ ಸಂಹಾರಕ್ಕಾಗಿ ಅಶಾಂತಿಯ ಪರಿಸ್ಥಿತಿಯಲ್ಲಿದ್ದ ಜನರ ಮನವನ್ನು ಶಾಂತಿಯತ್ತ ಕೊಂಡೊಯ್ಯಲು ಧರ್ಮರಾಜ್ಯ ಸ್ಥಾಪನೆಯಾಗಬೇಕಾದ್ದಲ್ಲಿ, ದುಷ್ಟರ ಸಂಹಾರ ಶಿಷ್ಟರ ಪಾಲನೆ ಅತ್ಯಗತ್ಯ ಎಂಬ ಮಾತನ್ನು ಕುರುಕುಲದ ಹಿರಿಯರಿಗೆಲ್ಲಾ ಸಾರಿಹೇಳಿದ, ಕೊನೆಗೆ ಧರ್ಮಸ್ಥಾಪನೆಗಾಗಿ ಯುದ್ಧವು ಅನಿವಾರ್ಯ ಎಂದೆನಿಸಿದಾಗ ಅರ್ಜುನನನ್ನೇ ಮುಂದಿಟ್ಟುಕೊಂಡು ವಿಶ್ವಕ್ಕೆ ಗೀತೋಪದೇಶವನ್ನು ಮಾಡಿದ. ನಿಶ್ಚಲವಾದ ಆತ್ಮವಿಶ್ವಾಸ, ಶ್ರದ್ಧೆ, ಭಕ್ತಿ ಮೊದಲಾದವುಗಳಿಂದ ಏನೆಲ್ಲವನ್ನು ಸಾಧಿಸಬಹುದು ಎಂಬ ಮಾತನ್ನು ಆತನು ಕುರುಕ್ಷೇತ್ರದ ನೆರಳಿನಲ್ಲಿ ಪ್ರಾಯೋಗಿಕವಾಗಿ ಸಿದ್ಧಪಡಿಸಿ ತೋರಿಸಿದ. ಆತನ ಈ ಪ್ರಯತ್ನದಿಂದಾಗಿ ಸಂಖ್ಯಾಬಲಕ್ಕಿಂತಲೂ ಶ್ರದ್ಧೆಯು ಬಹು ಹಿರಿದಾದುದು ಎಂಬ ಮಾತನ್ನು ಲೋಕವು ಅರಿಯುವಂತಾಯಿತು.

ಈ ಮಹಾನುಭಾವನು ತನ್ನ ಸೇನಾಬಲವನ್ನೆಲ್ಲಾ ಪ್ರತಿಸ್ಪರ್ಧಿಗಳಿಗೊಪ್ಪಿಸಿ ತನ್ನಲ್ಲಿ ಯಾರು ವಿಶ್ವಾಸವನ್ನಿಟ್ಟದ್ದಾರೆಯೋ ಅಂತಹ ಕೆಲವೇ ಜನರನ್ನು ಕೂಡಿಸಿಕೊಂಡು ಪಾಂಡವರೊಂದಿಗೆ ಅಗಾಧವಾದ ಶಕ್ತಿಯನ್ನು ಎದುರಿಸಲು ಪಣತೊಟ್ಟು ನಿಂತ. ತನ್ನನ್ನು ನಂಬಿದವರ ರಕ್ಷಣಾರ್ಥವಾಗಿ ತಾನು ಮಾಡಿದ ಪ್ರತಿಜ್ಞೆಯನ್ನೇ ಬದಿಗಿರಿಸಿ ಕೈಯಲ್ಲಿ ಸುದರ್ಶನ ಚಕ್ರವನ್ನು ಹಿಡಿದು ಭೀಷ್ಮರನ್ನೆದುರಿಸಲು ತನ್ನ ರಥದಿಂದ ಕೆಳಗಿಳಿದು ಧಾವಿಸಿಬಂದ. ಹಾಗೆ ಧಾವಿಸಿ ಬರುತ್ತಿದ್ದ ಶ್ರೀಕೃಷ್ಣನನ್ನು ಕಂಡ ಭೀಷ್ಮರು.

ಏಹ್ಯೇಹಿ ದೇವೇಶ ಜಗನ್ನಿವಾಸ
ನಮೋಽಸ್ತು ತೇ ಶಾರ್ಙ್ಗ ರಥಾಂಗ ಪಾಣೇ
ಪ್ರಸಹ್ಯ ಮಾಂ ಪಾಲಯ ಲೋಕನಾಥ
ರಥೋತ್ತಮಾದ್ಭೂತಶರಣ್ಯ ಸಂಖ್ಯೇ

ಹೇ ಮಹಾನುಭಾವ ನಿನಗೆ ಅತ್ಯಂತ ಭಕ್ತಿಯಿಂದ ಕೈಮುಗಿದು ಸ್ವಾಗತಿಸುತ್ತೇನೆ. ನನ್ನನ್ನು ಘಾತಿಸಿ ಕೆಳಕ್ಕುರುಳುವಂತೆ ಮಾಡು. ಹಾಗಾದಲ್ಲಿ ಮಾತ್ರ ನನಗೆ ಶ್ರೇಯಸ್ಕರ – ಎಂಬ ಮಾತನ್ನು ಆ ಪಿತಾಮಹರು ಕೃಷ್ಣನಿಗೆ ಹೇಳುತ್ತಾರೆ.

ನಾಸ್ತಿ ಲೋಕೇಷು ತದ್ಭೂತಂ
ಭವಿತಾ ನೋ ಭವಿಷ್ಯತಿ
ಯೋ ಜಯೇತ್ಪಾಂಡವಾನ್ಸಂಖ್ಯೇ
ಪಾಲಿತಾನ್ ಶಾರ್ಙ್ಗಧನ್ವನಾ

ಶ್ರೀಕೃಷ್ಣನು ಪಾಂಡವರನ್ನು ರಕ್ಷಿಸುತ್ತಾನೆ, ಆದುದರಿಂದ ಅವರನ್ನು ಜಯಿಸುವಂತಹವರು ಹಿಂದೆ ಆಗಿಲ್ಲ ಮುಂದೆ ಹುಟ್ಟುವುದಿಲ್ಲ ಎಂಬ ಮಾತನ್ನು ಹೇಳಿ ಶ್ರೀಕೃಷ್ಣನ ಪೂರ್ವ ಚರಿತ್ರೆಯನ್ನು ವಿವರಿಸಿ ಕೃಷ್ಣಾರ್ಜುನರಿಬ್ಬರೂ ನರ–ನಾರಾಯಣರೆಂಬ ಮಾತನ್ನು ಆ ವಯೋವೃದ್ಧರು ಹೊರಗೆಡಹುತ್ತಾರೆ.

ಶ್ರೀಮದ್ಭಾಗವತ ಗ್ರಂಥವು ದ್ವಾರಕಾ ನಗರವನ್ನು ಕುರಿತು ಈ ರೀತಿಯಾಗಿ ಹೇಳಿವೆ.

ದ್ವಾರಕಾಂ ಹರಿಣಾ ತ್ಯಕ್ತಾಂ
ಸಮುದ್ರೋ ಅಪ್ಲಾವಯತ್ ಕ್ಷಣಾತ್
ವರ್ಜಯಿತ್ವಾ ಮಹಾರಾಜ
ಶ್ರೀಮದ್ ಭಾಗವತಾಲಯಂ

ಶ್ರೀಕೃಷ್ಣನ ಅವತಾರ ಕಾರ್ಯವು ಸಮಾಪ್ತಿಯಾದ ಕ್ಷಣಮಾತ್ರದಲ್ಲಿಯೇ ಸಮುದ್ರರಾಜನು ಆ ಮಹಾನಗರವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡ ಅಥವಾ ಮುಳುಗಿಸಿದ ಎಂಬ ಮಾತನ್ನು ಹೇಳ ಲಾಗಿದೆ. ಈಗಲೂ ಸಹ ದ್ವಾರಕಾನಗರ ದಲ್ಲಿ ಸಮುದ್ರ ಮಧ್ಯದಲ್ಲಿ ಕಾಣುವ ಸ್ಥಳ ವನ್ನು ತೋರಿಸಿ ಅದನ್ನು ಬೇಟ್‌ದ್ವಾರಕಾ ಎಂದು ಹೇಳುವುದುಂಟು. ಅಂದಮೇಲೆ ಶ್ರೀ ಕೃಷ್ಣನ ಕಾಲದ ದ್ವಾರಕಾನಗರವು ಸಮುದ್ರ ದಲ್ಲಿ ಮುಳುಗಿಹೋಗಿದೆ ಎಂಬ ಮಾತಂತೂ ಭಾಗವತದಲ್ಲಿಯ ಈ ಶ್ಲೋಕದಿಂದ ಸ್ಪಷ್ಟ ವಾದಂತಾಯಿತು. ಅಂದಮೇಲೆ ಈಗಿರುವ ದ್ವಾರಕಾನಗರ ಹಾಗೂ ಅಲ್ಲಿರುವ ದೇವಾಲಯ ಇವೆರಡೂ ಶ್ರೀಕೃಷ್ಣನ ಕಾಲದ ಕುರುಹುಗಳಲ್ಲ ಎಂಬ ಮಾತು ಸ್ಪಷ್ಟ ವಾಗುತ್ತದೆ. ಆದುದರಿಂದ ದ್ವಾಪರಯುಗದ ಶ್ರೀಕೃಷ್ಣನ ಕುರುಹುಗಳನ್ನು ಕುರಿತು ನಾವು ಯೋಚಿಸಬೇಕಾಗುತ್ತದೆ.

ಶ್ರೀಕೃಷ್ಣ ವಾಸುದೇವನನ್ನು ದೇವಾಲಯದಲ್ಲಿರಿಸಿ ಪೂಜಿಸುವಂತಹ ಪದ್ಧತಿಯು ಕ್ರಿ. ಪೂ. ಮೂರನೆಯ ಶತ ಮಾನದಲ್ಲಿಯೇ ಇದ್ದುದನ್ನು ಮಧ್ಯ ಪ್ರದೇಶ ದಲ್ಲಿರುವ ವಿದಿಶಾ ನಗರದಲ್ಲಿರುವ ಗರುಡ ಗಂಬದ ಮೇಲೆ ಹೆಲಿಡೋರಸ್ ಬರೆಯಿ ಸಿದ ಶಾಸನದಿಂದ ನಾವು ತಿಳಿದುಕೊಳ್ಳ ಬಹುದಾಗಿದೆ. ಈ ದೇವಾಲಯದಲ್ಲಿ ವಾಸು ದೇವ, ಕೃಷ್ಣ, ಸಂಕರ್ಷಣ (ಬಲರಾಮ) (ತಾಲಧ್ವಜವಿದೆ) ಪ್ರದ್ಯುಮ್ನ (ಮಕರಧ್ವಜ ವಿದೆ) ಅನಿರುದ್ಧ ಹಾಗೂ ಸಾತ್ಯಕಿ ಮೊದಲಾದ ಯಾದವ ವೃಷ್ಣಿಕುಲದ ವೀರರು ಪೂಜಿಸಲ್ಪಟ್ಟಿದ್ದಾರೆ. ಮಹಾ ಮಹಾಭಾರತ ಕಥೆಯ ಆಧಾರದಿಂದ ಕೃಷ್ಣ ನಗರಿಯಿಂದ ದೂರದಲ್ಲಿರುವ ವಿದಿಶಾದಂತಹ ನಗರದಲ್ಲಿಯೂ ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಶ್ರೀಕೃಷ್ಣನ ಗುಡಿಗಳು ಇದ್ದವು ಎಂದು ಹೇಳುವಾಗ ದ್ವಾರಕಾನಗರ ದಲ್ಲಿ ಅದಕ್ಕೂ ಮೊದಲೇ ಶ್ರೀಕೃಷ್ಣನ ವಿಗ್ರಹಗಳು ಪೂಜೆಗೊಳ್ಳುತ್ತಿದ್ದವು ಎಂಬ ಮಾತಿನಲ್ಲಿ ನಂಬಿಕೆಯನ್ನಿಡಬೇಕಾಗುತ್ತದೆ

ಶ್ರೀಕೃಷ್ಣನು ದ್ವಾರಕಾನಗರದಲ್ಲಿ ಹದಿ ನಾರು ವರ್ಷಗಳ ಕಾಲ ಇದ್ದನೆಂದು ತಿಳಿದು ಬರುತ್ತದೆ. ಛಾಂದೋಗ್ಯ ಉಪನಿಷತ್ತು ರಚನೆಯಾದಾಗ ಅಥವಾ ಪಾಣಿನಿಗಿಂತ ಪೂರ್ವದಲ್ಲಿ (ಕ್ರಿ. ಪೂ. ಎಂಟನೆಯ ಶತಮಾನ) ಕೃಷ್ಣನು ದೇವತ್ವಕ್ಕೇರಿರಬೇಕು ಎಂಬ ಮಾತು ಸ್ಪಷ್ಟವಾಗುತ್ತದೆ. ಈ ಎಲ್ಲ ವಿಷಯಗಳನ್ನು ಯೋಚಿಸಿದಾಗ ಹಾಗೂ ಭಾಗವತದ ಶ್ಲೋಕವನ್ನು ಮನನ ಮಾಡಿದಾಗ ಶ್ರೀಕೃಷ್ಣನ ಕಾಲದ ದ್ವಾರಕೆ ಯನ್ನು ಕುರಿತು ಆ ಅವಶೇಷಗಳನ್ನು ಹುಡುಕುವ ಪ್ರಯತ್ನ ಅತ್ಯಾವಶ್ಯಕ ಎಂದೆನ್ನಿಸುತ್ತದೆ. ದ್ವಾರಕಾನಗರದ ಸಮೀಪ ದಲ್ಲಿರುವ ಜಾಮನಗರ ಜಿಲ್ಲೆಯಲ್ಲಿ ಹರಪ್ಪ ಸಂಸ್ಕೃತಿಯ ಅನೇಕ ಕುರುಹುಗಳು ನೆಲೆಗಳು ಕಾಣಸಿಕ್ಕಿವೆ. ಬೇಟ್‌ದ್ವಾರಕಾದಲ್ಲಿಯೂ ಸಹ ಹರಪ್ಪ ಸಂಸ್ಕೃತಿಗೆ ಪುಷ್ಟಿಯನ್ನೀಯು ವಂತಹ ಅನೇಕ ಕುರುಹುಗಳು ವಸ್ತುಗಳು ಸಿಕ್ಕಿವೆ. ಆದುದರಿಂದ ದ್ವಾರಕಾನಗರದಲ್ಲಿ ಅತ್ಯಂತ ಸುಸಂಸ್ಕೃತವಾದ ನಾಗರಿಕತೆಯು ನೆಲೆಗೊಂಡಿತ್ತು ಎಂಬ ಮಾತು ನಿಶ್ಚಿತ ವಾಗುತ್ತದೆ.

ಇಂದು ದ್ವಾರಕಾನಗರದಲ್ಲಿರುವ ಶ್ರೀ ಕೃಷ್ಣನ ಜಗತ್‌ಮಂದಿರವು ಅರಬ್ಬೀ ಸಮುದ್ರದತ್ತ ಮುಖಮಾಡಿ ನಿಂತಿದೆ. ಇದನ್ನು ಶ್ರೀಕೃಷ್ಣನ ಮೊಮ್ಮಗನೇ ಕಟ್ಟಿಸಿದನೆಂಬುದಾಗಿ ಹೇಳುತ್ತಾರೆ. ಈ ದೇವಾಲಯದ ಮೇಲಿರುವ ಮುವತ್ತೆರಡು ಅಡಿ ಎತ್ತರದ ಶಿಖರವು ಹತ್ತು ಕಿಲೋ ಮೀಟರ್ ದೂರದಲ್ಲಿರುವ ಯಾತ್ರಿಕರಿಗೆ ಕಾಣಬರುತ್ತದೆ. ಈ ಮಂದಿರವನ್ನು ಸುಣ್ಣದ ಕಲ್ಲಿನಂತಹ ಕಲ್ಲುಗಳಿಂದ ಕಟ್ಟಿರು ತ್ತಾರೆ. ಮಂದಿರದಲ್ಲಿ ಗರ್ಭಗೃಹ, ಅಂತರಾಳ, ಪ್ರದಕ್ಷಿಣ ಪಥ, ಹಾಗೂ ಮಹಾಮಂಟಪ ಮತ್ತು ಮೂರು ಮುಖ ಮಂಟಪಗಳಿವೆ. ಇಲ್ಲಿರುವ ಗರ್ಭಗೃಹವನ್ನು ಅಥವಾ ನಿಜಮಂದಿರವನ್ನು (ಕ್ರಿ. ಶ. ಹನ್ನೆರಡನೆಯ ಅಥವಾ ಹದಿಮೂರನೆಯ ಶತಮಾನದ ದೇವಾಲಯವಾಗಿದ್ದು) ಐದು ಅಂತಸ್ತಿನ ಮಹಾಮಂಟಪಗಳು ಎಂದು ಗುರುತಿಸಲಾಗುತ್ತದೆ. ಆದರ ಇನ್ನುಳಿದ ಭಾಗಗಳು ಹದಿನೈದು ಅಥವಾ ಹದಿನಾರ ನೆಯ ಶತಮಾನದಲ್ಲಿ ನಿರ್ಮಾಣವಾಗಿರ ಬಹುದು ಎಂದು ಹೇಳುತ್ತಾರೆ. ಮಹಾ ಮಂಟಪವು ಬಹು ಸುಂದರವಾಗಿ ಕಟ್ಟ ಲ್ಪಟ್ಟಿದ್ದು ಆ ಮಂಟಪವು ಎಪ್ಪತ್ತೆರಡು ಸ್ತಂಭಗಳ ಮೇಲೆ ನಿಂತಿದೆ. ಈ ದೇವ ಮಂದಿರದ ಗರ್ಭಗುಡಿಯಲ್ಲಿರುವ ಮೂರ್ತಿಯು ಶ್ರೀಕೃಷ್ಣ ವಾಸುದೇವನ ದಾಗಿದ್ದು ಅದು ಕ್ರಿ. ಶ. ಸಾವಿರದ ಒಂದು ನೂರ ನಾಲ್ಕರಲ್ಲಿ ವೈಷ್ಣವ ಸಂಪ್ರದಾಯದ ವಲ್ಲಭಾಚಾರ್ಯರಿಂದ ಸ್ಥಾಪಿಸಲ್ಪಟ್ಟಿತು ಎಂದೂ ಹೇಳುತ್ತಾರೆ. ಈ ವಿಗ್ರಹಕ್ಕೆ ನಾಲ್ಕು ಭುಜಗಳಿವೆ. ಇಲ್ಲಿರುವ ಮೊದಲ ನೆಯ ವಿಗ್ರಹವನ್ನು ಧಾಳಿಕಾರರು ಕೊಂಡೊ ಯ್ದರೆಂದೂ ಹೇಳುತ್ತಾರೆ. ಇಲ್ಲಿರುವ ದೇವಮಂದಿರವು ಮಹಾಮಹಿಮರಾದ ಶಂಕರಾಚಾರ್ಯರಿಂದ ಪುನರುತ್ಥಾನ ಹೊಂದಿತೆಂದೂ ಅನಂತರ ಸಾವಿರದ ಒಂದು ನೂರ ಇಪ್ಪತ್ತರಲ್ಲಿ (1120) ಗುಜರಾತದ ರಾಜಮಾತೆ ಈ ದೇವಾಲಯದ ಜೀರ್ಣೋದ್ಧಾರ ಕಾರ್ಯವನ್ನು ಕೈಗೆತ್ತಿ ಕೊಂಡರೆಂದೂ, ಅವರಾದ ಮೇಲೆ ಸಾವಿರದ ಏಳುನೂರ ಮೂವತ್ತರಲ್ಲಿ (1730) ಪ್ರಕಾಶಾನಂದ ಶಂಕರಾಚಾರ್ಯರು, ಖಂಡೇರಾವ್ ಗಾಯಕ್ವಾಡ್ ಮೊದಲಾದವರು ಈ ದೇವಮಂದಿರ ಜೀರ್ಣೋದ್ಧಾರ ಕಾರ್ಯ ವನ್ನು ನಡೆಸಿದರೆಂದು ತಿಳಿದುಬರುತ್ತದೆ.

ಇದುವರೆಗೆ ಪ್ರಸಿದ್ಧವಾದ ದ್ವಾರಕಾ ನಗರವು ಇಂದು ಕಾಣುವ ಸ್ಥಳದಲ್ಲಿ ಇರಲಿಲ್ಲ ವೆಂದು ಕೆಲವರ ವಾದವಿದೆ. ಒಂದುಕಾಲ ದಲ್ಲಿ ಗಿರಿನಾರ್, ಮಾಧವಪುರ ಈ ಭಾಗದಲ್ಲಿ ಮೂಲದ್ವಾರಕೆ ಇತ್ತೆಂದೂ ಅದನ್ನು ಮೂಲ ದ್ವಾರಕಾ ಅಥವಾ ವಿಶ್ವದಾ (ಸೌರಾಷ್ಟ್ರ) ಎಂದು ಕರೆಯುತ್ತಿದ್ದರೆಂದೂ ರಾಜಾಸ್ಥಾನ ವನ್ನು ಖೇಡದ್ವಾರಕಾ ಎಂದು ಕರೆಯುತ್ತಿದ್ದ

ರಿಂದಲೂ ಕೆಲವರ ಅಭಿಪ್ರಾಯವಿತ್ತು. ಆದರೆ 1979 ರಲ್ಲಿ ಭಾರತದ ಪ್ರಾಚ್ಯವಸ್ತು ಸಂಶೋಧನಾಲಯದವರು ಜನವರಿ ತಿಂಗಳಲ್ಲಿ ಭೂಶೋಧನೆಯ ಕಾರ್ಯಕ್ರಮವನ್ನು ಕೈ-ಕೊಂಡಾಗ ಇಲ್ಲಿರುವ ಈಗಿನ ದ್ವಾರಕಾಧೀಶನ ಮಂದಿರಕ್ಕಿಂತ ಮೊದಲು ಅಂದರೆ ಇಂದು ನಾವು ಯಾವ ದೇವಾಲಯವನ್ನು ಕಾಣುತ್ತೇವೆಯೋ ಅದಕ್ಕೂ ಪೂರ್ವದಲ್ಲಿ ನಾಲ್ಕು ದೇವಾಲಯಗಳನ್ನು ಕಟ್ಟಿಸಿದುದರ ಅವಶೇಷಗಳು ದೊರೆತಿವೆ. ದ್ವಾರಕಾಧೀಶನ ಮಂದಿರದ ಹೊರಾಂಗಣದಲ್ಲಿಯ ಪ್ರಾಚೀನದೇವಾಲಯದ ಅಡಿಪಾಯವಂತೂ ಕ್ರಿ. ಶ. ಒಂದನೆಯ ಶತಮಾನದಿಂದಿರಬಹುದೆಂದು ಇಲ್ಲಿ ಕಾಣಬರುವ ಅವಶೇಷಗಳಿಂದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆ. ಅಷ್ಟೇ ಅಲ್ಲದೆ ಭೂಮಿಯ ಅಗೆತದಲ್ಲಿ ದೊರೆತ ಮಣ್ಣಿನಪಾತ್ರೆಗಳಂತೂ ಕ್ರಿ. ಪೂ. ಹದಿಮೂರು ಅಥವಾ ಹದಿನಾಲ್ಕನೆಯ ಶತಮಾನದ ಕೆಂಪುಬಣ್ಣದ ಪಾತ್ರೆಗಳಾಗಿ ಕಾಣಿಸುತ್ತವೆ. ಹೀಗೆ ದೊರೆತ ಈ ಮಣ್ಣಿನ ಪಾತ್ರೆಗಳನ್ನು ಅಭ್ಯಾಸಮಾಡುತ್ತ ಹೋದಂತೆಲ್ಲಾ ಆ ಕಾಲವು ಮಹಾಭಾರತದ ಕಾಲವನ್ನು ಹೋಲುತ್ತದೆ. ಯಾಕೆಂದರೆ ಶ್ರೀಕೃಷ್ಣನ ಕಾಲದಲ್ಲಿ ನಡೆದು ಹೋದ ಕುರುಕ್ಷೇತ್ರ ಯುದ್ಧದ ಕಾಲವನ್ನು ಕ್ರಿ. ಪೂ. 1424 ಎಂದು ಅಂದಾಜು ಮಾಡಲಾಗಿದೆ. ಆದುದರಿಂದ ಈಗ ದೊರೆತಿರುವ ಅವಶೇಷಗಳಿಂದ ಇಲ್ಲಿಯ ಪರಿಸರದ ಭಾಗವೆಲ್ಲಾ ಶ್ರೀಕೃಷ್ಣನ ಕಾಲದಲ್ಲಿ ನಿರ್ಮಿತವಾದುದೆಂದು ಹೇಳಬಹುದಾಗಿದೆ.

ಇಂದು ಕಾಣಬರುವ ದ್ವಾರಕಾಧೀಶನ ದೇವಾಲಯದ ಸುತ್ತಮುತ್ತಲೂ ಬೆಳೆದಿದ್ದ ಅಂಗಡಿಗಳನ್ನು ಹಾಗೂ ಅವಕ್ಕಂಟಿಕೊಂಡಿರುವ ಮನೆಗಳನ್ನು ತೆಗೆದುಹಾಕಿದಾಗ ಮೋಕ್ಷದ್ವಾರದ ಸಮೀಪದಲ್ಲಿ 1.5 ಮೀಟರಿನ ಕೆಳಭಾಗದಲ್ಲಿ ಗರ್ಭಗುಡಿಯ ಅಂಗಳ ಹಾಗೂ ಪ್ರವೇಶದ್ವಾರ ಇವೇ ಮೊದಲಾದವುಗಳು ಕಾಣಿಸಿಕೊಂಡವು. ಈಗಿನ ದ್ವಾರಕಾಧೀಶನ ಮಂದಿರಕ್ಕಿಂತಲೂ ಮೊದಲಿದ್ದ ಮಂದಿರವು ಮಣ್ಣಿನಲ್ಲಿ ಹೂತು ಹೋಗಿದ್ದು ಇದು ನಾಲ್ಕನೆಯ ಮಂದಿರದ ವಾಸ್ತುಶಿಲ್ಪವಾಗಿದ್ದು ಅದರ ರಚನೆ ಬಹು ಉನ್ನತ ಮಟ್ಟದ್ದಾಗಿದೆ. ಇದರ ಗೋಡೆಗಳ ಮೇಲೆ ಹೋರಾಡುತ್ತಿರುವ ಆನೆಗಳ ಚಿತ್ರ ಹಾಗೂ ವಿಷ್ಣು, ವರಾಹ, ಇಂದ್ರ, ಲಕ್ಷ್ಮಿ ಮೊದಲಾದ ಕೆತ್ತನೆಯ ಚಿತ್ರಗಳು ಕಾಣಸಿಗುತ್ತವೆ. ಇಲ್ಲಿಯ ಶಿಲ್ಪಕಲೆಯ ಪ್ರಭಾವವನ್ನು ಯೋಚಿಸುತ್ತಿದ್ದಂತೆ ಚಾಲುಕ್ಯ ಹಾಗೂ ರಾಷ್ಟ್ರಕೂಟರ ಪ್ರಭಾವವು ಇಲ್ಲಿ ಎದ್ದು ಕಾಣುತ್ತದೆ. ಈವರೆಗೆ ದೊರೆತ ಪ್ರಾಚ್ಯವಸ್ತುಗಳೆಲ್ಲಾ ರಾಷ್ಟ್ರಕೂಟದವರ ಕಾಲದವುಗಳೆಂದು ಗುರುತಿಸಲಾಗಿದೆ. ಕೆಲವು ವಿಷ್ಣುವಿನ ವಿಗ್ರಹಗಳು ದೊರೆತಿವೆ. ಗರ್ಭಗೃಹದಲ್ಲಿ ದೊರೆತ ಪೀಠಗಳನ್ನು ಕುರಿತು ಅಭ್ಯಾಸಮಾಡಿದಾಗ ಇವು ಒಂದು ಕಾಲ ವಿಷ್ಣು ಅಥವಾ ವಾಸುದೇವನ ದೇವಮಂದಿರವಾಗಿರಬಹುದೆಂಬ ಅಂದಾಜು ಸ್ಪಷ್ಟವಾಗುತ್ತದೆ.

ದೇವಮಂದಿರದ ಮುಂಭಾಗದ ಅಂಗಡಿಗಳನ್ನೆಲ್ಲಾ ಕೆಡವಿಸುತ್ತ ಹೋದಂತೆಲ್ಲಾ ಉತ್ತರಬಾಗಿಲಿನ ಸಮೀಪದಲ್ಲಿ ಸಂಶೋಧಕರಿಗೆ ಬೇರೊಂದು ದೇವಾಲಯವು ಕಾಣಿಸಿತು. ಈ ದೇವಾಲಯದ ಗೋಡೆಗಳ ಮೇಲೆ ನೃತ್ಯಭಂಗಿಯಲ್ಲಿದ್ದ ಶಿಲ್ಪದೊಂದಿಗೆ ಸಂಗೀತಗಾರ ಕೂಡಿದ ಚಿತ್ರಗಳು ಕಾಣಲ್ಪಟ್ಟವು. ಈ ನಾಲ್ಕನೆಯ ಹಾಗೂ ಮೂರನೆಯ ದೇವಾಲಯದ ಅಡಿಭಾಗಗಳನ್ನು ಇನ್ನಷ್ಟು ಆಳವಾಗಿ ಅಗೆದು ಸ್ಪಷ್ಟ ಮಾಡಿದಾಗ ಕ್ರಿ. ಪೂ. ಎಂಟರಿಂದ ಹಿಡಿದು ಹನ್ನೆರಡನೆಯ ಶತಮಾನದವರೆಗಿನ ಅನೇಕ ಶಿಲ್ಪಗಳು ಕಾಣಿಸಿಕೊಂಡವು. ಅದೇ ರೀತಿಯಾಗಿ ಮೂರನೆಯ ದೇವಾಲಯದ ಎರಡೂ ಬದಿಗಳಲ್ಲಿ ಪ್ರಾರಂಭಿಸಿದ ಶೋಧನಾಕಾರ್ಯವನ್ನು ಮುಂದುವರೆಸಿದಾಗ ಮತ್ತೆ ಎರಡು ದೇವಾಲಯಗಳ ಅವಶೇಷಗಳು ಗಮನಕ್ಕೆ ಬರುವಂತಾಯಿತು. ಹೀಗೆ ಕಾಣಿಸಿಕೊಂಡ ಸ್ಥಳಗಳನ್ನು ಕುರಿತು ಅಭ್ಯಾಸ ಮಾಡಿದಾಗ ಈ ಮೂರೂ ದೇವಾಲಯಗಳನ್ನು ಒಂದು ನಾಶವಾದನಂತರ ಅದರ ಮೇಲೆ ಇನ್ನೊಂದನ್ನು, ಮತ್ತೊಂದನ್ನು ಕಟ್ಟುತ್ತ ಬಂದಿರಬಹುದೆಂದು ಊಹಿಸಲಾಗಿದೆ. ಇಲ್ಲಿ ನಮಗೆ ದೊರೆತ ಮೊದಲನೆಯ ದೇವಾಲಯದ ಅವಶೇಷಗಳನ್ನು ಪರೀಕ್ಷಿಸಿದಾಗ ಅದು ಕ್ರಿ. ಶ. ಒಂದನೆಯ ಶತಮಾನದ್ದಾಗಿದ್ದರೆ ಎರಡನೆಯ ದೇವಾಲಯವು ಮೂರು ಅಥವಾ ನಾಲ್ಕನೆಯ ಶತಮಾನದ್ದಾಗಿರಬಹುದೆಂದು ಅಂದಾಜು ಮಾಡಲಾಗಿದೆ.

ಮೊದಲನೆಯ ದೇವಾಲಯದ ಕೆಳಗೆ ಇನ್ನಷ್ಟು ಭೂಶೋಧನೆ ನಡೆಸಿದಾಗ ದ್ವಾರಕಾ ಪಟ್ಟಣವು ಕ್ರಿ. ಪೂ. ಹದಿಮೂರನೆಯ ಶತಮಾನದಲ್ಲಿಯೇ ಅಸ್ತಿತ್ವದಲ್ಲಿ ಇದ್ದಿರಬಹುದೆಂದು ಖಚಿತವಾಗುತ್ತದೆ. ಇಲ್ಲಿ ದೊರೆತ ಕೆಂಪುಮಣ್ಣಿನ ಪಾತ್ರೆಗಳು ಹಾಗೂ ಜಾಮ್‌ನಗರ ಜಿಲ್ಲೆಯಲ್ಲಿ ಇನ್ನು ಬೇರೆಕಡೆಗಳಲ್ಲಿ ಅಗೆದಾಗ ದೊರೆತ ಪಾತ್ರೆಗಳು ಇವೆರಡೂ ಕ್ರಿ. ಪೂ. ಸಾವಿರದ ಆರುನೂರರಿಂದ ಸಾವಿರದ ಏಳುನೂರರವರೆಗೆ ಈ ಪರಿಸರದಲ್ಲೆಲ್ಲಾ ಒಳ್ಳೆಯ ಸುಸಂಸ್ಕೃತವಾದ ನಾಗರಿಕತೆಯ ಜನವಸತಿಯು ಇತ್ತೆಂದೂ ತಿಳಿದುಬರುತ್ತದೆ. ಹರಪ್ಪ ಹಾಗೂ ಮೊಹಂಜೋದಾರೊ ಮೊದಲಾದ ಭಾಗಗಳಲ್ಲಿ ವಾಸಿಸುತ್ತಿದ್ದ ಸುಸಂಸ್ಕೃತಿಯಿಂದ ಕೂಡಿದ ಜನರು ಅಂದಿನಕಾಲದಲ್ಲಿ ಆಯಾ ನಗರಗಳು ನಾಶವಾದನಂತರ ಬೇರೆ ಬೇರೆ ಭಾಗಗಳಿಗೆ ಹೋಗಿ ವಾಸಮಾಡತೊಡಗಿದರು. ಹೀಗೆ ಬೇರೆ ಭಾಗದಿಂದ ಬಂದು ವಾಸಿಸುತ್ತಿದ್ದ ಜನಾಂಗವು ಇಲ್ಲಿಯದಾಗಿರಬಹುದು. ಈ ಭಾಗವನ್ನು ಬೇಚ್ ದ್ವಾರಕಾ ಎಂದು ಗುರುತಿಸುವುದುಂಟು.

ಶ್ರೀಕೃಷ್ಣನು ಹಾಳುಬಿದ್ದ ಕುಶಸ್ಥಳದ ಭಾಗದಲ್ಲಿಯೇ ದ್ವಾರಕಾನಗರವನ್ನು ನಿರ್ಮಿಸಿದನೆಂದು ಕೆಲವರ ಅಭಿಪ್ರಾಯವಿದೆ. ಅನರ್ತನ ಮಗನಾದ ರೇವತನು ಸೌರಾಷ್ಟ್ರದಲ್ಲಿ ಯಾದವರನ್ನು ನೆಲೆಸುವಂತೆ ಮಾಡಿದ್ದ ಆದರೆ ಆ ರಾಜನ ಕಾಲದಲ್ಲಿ ಪಂಚಜನ ರಾಕ್ಷಸರಿಂದ ಅವರೆಲ್ಲರಿಗೂ ತೊಂದರೆಯಾದಾಗ ಆತನು ಯಾದವರೊಂದಿಗೆ ಮಥುರಾ ಮಂಡಲಕ್ಕೆ ಹೋಗಿದ್ದ. ಜರಾಸಂಧನು ಮೇಲಿಂದ ಮೇಲೆ ಮಥುರಾನಗರದ ಮೇಲೆ ದಾಳಿಯನ್ನು ಆರಂಭಿಸಿದಾಗ ಶ್ರೀಕೃಷ್ಣನು ಓಖಾಮಂಡಲಕ್ಕೆ ಬಂದು ಕುಶಸ್ಥಳಿಯ ಭಾಗದಲ್ಲಿಯೇ ದ್ವಾರಕಾನಗರವನ್ನು ನಿರ್ಮಾಣಮಾಡಿದ.

(32ನೇ ಪುಟ ನೋಡಿ)

# ದ್ರಮಿಡೋಪನಿಷತ್ ತಾತ್ಪರ್ಯ ರತ್ನಾವಳಿ

ವೆಂಕಟನಾಥರೆಂಬ ಅಪರ ನಾಮಧೇಯವುಳ್ಳ ನಿಗಮಾಂತ ಮಹಾದೇಶಿಕರು ವಿಶಿಷ್ಟಾದ್ವೈತ ದರ್ಶನ ಪ್ರಪಂಚದಲ್ಲಿ ಶ್ರೀರಾಮಾನುಜಾಚಾರ್ಯ ರಿಗೆ ಮಾತ್ರ ದ್ವಿತೀಯರು. ಅವರು ಉದ್ದಾಮ ಸಂಸ್ಕೃತ ಪಂಡಿತರು. ಶ್ರೇಷ್ಠ ವರ್ಗದ ದಾರ್ಶನಿಕರು. ಹಾಗೆಯೇ ದ್ರಾವಿಡ ಭಾಷೆಗಳಲ್ಲಿಯೂ ಅಷ್ಟೇ ಪಾರಂಗತರು. ಅವರಿಗೆ ಆಚಾರ್ಯರುಗಳಲ್ಲಿದ್ದಂತೆ ಆಳ್ವಾರ್ರುಗಳಲ್ಲಿಯೂ ಸಮಾನ ಭಕ್ತಿ. ವಿಶಿಷ್ಟಾ ದ್ವೈತದ ಸಿದ್ಧಾಂತಕ್ಕೆ ಸಂಸ್ಕೃತ ಮೂಲಗ್ರಂಥ ಗಳು ಎಷ್ಟು ಆಧಾರವೋ ಆಳ್ವಾರ್ರುಗಳ ಪ್ರಬಂಧ ಗಳೂ ಅಷ್ಟೇ ಪ್ರಮಾಣಭೂತವಾಗಿವೆ. ಅವರು ಸಂಸ್ಕೃತ ದಾರ್ಶನಿಕ ಗ್ರಂಥಗಳಿಗೆ ಟೀಕೆ, ಟಿಪ್ಪಣಿ, ಮತ್ತು ವ್ಯಾಖ್ಯಾನಗಳನ್ನು ರಚಿಸಿರುವಂತೆ ದ್ರಾವಿಡಗ್ರಂಥಗಳಿಗೂ ಆಳ್ವಾರ್ರ ಪ್ರಬಂಧಗ ಳಿಗೂ ಸಂಗ್ರಹ, ವಿವರಣೆ ಮತ್ತು ಸಾರಾರ್ಥ ಭೂತವಾದ ಗ್ರಂಥಗಳನ್ನು ರಚಿಸಿದ್ದಾರೆ. ಅವುಗ ಳಲ್ಲಿ ಅವರ ನಮ್ಮಾಳ್ವಾರ್ರವರ ಉಪನಿಷತ್ತಾ ತ್ಪರ್ಯ ರೂಪವಾಗಿರುವ 'ದ್ರಮಿಡೋಪನಿಷತ್ತಾ ತ್ಪರ್ಯ ರತ್ನಾವಳಿ' 'ದ್ರಮಿಡೋಪನಿಷತ್‌ಸಾರ' ಎಂಬ ಎರಡು ಗ್ರಂಥಗಳು ಬಹು ಅಮೂಲ್ಯ ವಾಗಿವೆ.

ನಮ್ಮಾಳ್ವಾರ್ರವರು 12 ಜನ ಆಳ್ವಾರುಗಳಲ್ಲಿ ಪ್ರಸಿದ್ಧರು. ಆಳ್ವಾರ್ರುಗಳಿಂದ ರಚಿತವಾದ ನಾಲ್ಕು ಸಾವಿರ ಪ್ರಬಂಧಗಳಲ್ಲಿ ನಮ್ಮಾಳ್ವಾರ್ರದು ನಾಲ್ಕ ನೆಯ ಒಂದು ಭಾಗಕ್ಕಿಂತ ಹೆಚ್ಚಾಗಿದೆ. ಅವರು 'ತಿರುವಿರುತ್ತಂ' 'ತಿರುವಾಶಿರಿಯಂ' 'ತಿರುವಂ ದಾದಿ' ಮತ್ತು 'ತಿರುವಾಯ್‌ಮೊಳಿ' ಎಂಬ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ.

ವೆಂಕಟನಾಥರಿಗೆ 'ತಿರುವಾಯ್‌ಮೊಳಿ' ಚತು ರ್ವೇದ ಸಾರ. ವೇದೋಪಬೃಂಹಣಾರ್ಥವಾಗಿಯೇ ರಚಿತವಾದುದು. ನವರಸಭರಿತವಾದುದು, ಪುರಾ ಣೇತಿಹಾಸಗಳಂತೆಯೇ ಎಲ್ಲರ ಮೇಲೆಯೂ ವಿಶೇಷ ಪರಿಣಾಮವುಳ್ಳದ್ದು, ಭಕ್ತಿ ಪ್ರಧಾನವಾಗಿಯೂ ಗಾನಯೋಗ್ಯವಾಗಿಯೂ ಇರುವುದರಿಂದ ಸರ್ವ ರಿಗೂ ಗ್ರಾಹ್ಯವಾದುದು. ಅಗಸ್ತ್ಯರಿಂದ ಪ್ರಚಾರಿತವಾದ ದ್ರವಿಡ ಭಾಷೆಯಲ್ಲಿರುವುದರಿಂದ ಅದರ ಮೇಲ್ಮೈ ಹೆಚ್ಚಿದೆ. ಶ್ರೀವೈಷ್ಣವರಿಗಂತೂ ಅದು ಪರಮಗ್ರಾಹ್ಯ. ಶ್ರೀದೇವೀ ಸಹಿತನಾದ ಭಗವಂತನ ಗುಣಗರ್ಭಿತವಾಗಿರುವುದರಿಂದ ಅದು ಪರಮಕಲ್ಯಾಣದಾಯಕವಾದುದು.

'ತಿರುವಾಯ್‌ಮೊಳಿ'ಯು 10 ಶತಕಗಳಾ ಗಿಯೂ ನೂರು ದಶಕಗಳಾಗಿಯೂ 1102 ಗಾಥೆ ಗಳಾಗಿಯೂ ವಿಭಾಗವಾಗಿವೆ. ಇದನ್ನು ತಾತ್ಪರ್ಯ ರತ್ನಾವಳಿಯ 120 ಶ್ಲೋಕದ ಲ್ಲಿಯೂ 'ಸಾರ'ದ 26 ಶ್ಲೋಕಗಳಲ್ಲಿಯೂ ಸಂಗ್ರಹಿಸಿದ್ದಾರೆ. ಮೊದಲು ಸಮಷ್ಟ್ಯರ್ಥ ವನ್ನೂ ಅನಂತರ ಶತಕಾರ್ಥಗಳನ್ನೂ, ಅನಂತರ ದಶಕಾರ್ಥಗಳನ್ನೂ ಆ ದಶಕಗಳಲ್ಲಿರುವ ಪ್ರತಿ ಯೊಂದು ಪಾಶುರದ ಪ್ರಧಾನವಾದ ಅರ್ಥವನ್ನು ಬಹುಸಂಗ್ರಹವಾಗಿ ಕ್ರೋಢೀಕರಿಸಿದ್ದಾರೆ. ಇಲ್ಲಿ ಕಾಣಬರುವ ಆಚಾರ್ಯರ ಸಾರಾರ್ಥಗ್ರಹಣವು ಅತ್ಯದ್ಭುತವಾಗಿದೆ. ದಶಕಾರ್ಥಗಳ ಪ್ರತಿಪಾದ ನೆಯು ಬಹುವಿಸ್ತಾರವಾಗಿರುವುದರಿಂದ ಇಲ್ಲಿ ಶತಕಾರ್ಥವನ್ನು ಮಾತ್ರ ಪರಿಚಯಮಾಡಲು ಪ್ರಯತ್ನಪಟ್ಟಿದೆ. ಮುಂದಿನ ಶ್ಲೋಕದಲ್ಲಿ ಸಮ ಷ್ಟ್ಯರ್ಥವು ನಿರೂಪಿತವಾಗಿದೆ.

ಪ್ರಾಚ್ಯೇ ಸೇವಾನುಗುಣ್ಯಾತ್ ಪ್ರಭುಮಿಹ
ಶತಕೇ ಮಂಸ್ತ ಮುಕ್ತೇರುಪಾಯಂ
ಮುಕ್ತಿಃ ಪ್ರಾಪ್ಯಂ ದ್ವಿತೀಯೇ ಮುರರಿಪು
ಬುಬುಧೇ ಭೋಗ್ಯತಾ ವಿಸ್ತರೇಣ।
ಪ್ರಾಪ್ಯತ್ವೋಪಾಯಭಾವೌ
ಶುಭ ಸುಭಗತನೋರಿತ್ಯವಾದಿ ತೃತೀಯೇ
ವಧ್ಯಪ್ರಾಪ್ಯಶ್ಚತುರ್ಥೇ
ಸಮಭವದಿತರೈರಪ್ಯನನ್ಯಾದುಪಾಯಃ॥

ಆಳ್ವಾರ್ರವರು ಪ್ರಥಮ ಶತಕದಲ್ಲಿ ಸೇವ್ಯ ತ್ವಾನುಗುಣನಾದ ಭಗವಂತನನ್ನು ಮೋಕ್ಷೋ ಪಾಯನೆಂದು ಪ್ರತಿಪಾದಿಸಿದರು. ಎರಡನೆಯ ಶತಕದಲ್ಲಿ ಅವನ ಭೋಗ್ಯತೆಯನ್ನು ವಿಸ್ತರಿಸಿ ಮುಕ್ತಿಪ್ರಾಪ್ಯನೂ ಅವನೇ ಎಂದು ನಿಷ್ಕರ್ಷಿಸಿ ದರು. ಈ ಉಪಾಯತ್ವಪ್ರಾಪ್ಯತ್ವಗಳೆರಡೂ ದಿವ್ಯಮಂಗಳ ವಿಗ್ರಹನಾದ ಅವನಿಗೇ ಸಲ್ಲತಕ್ಕ ದ್ದೆಂದು ಮೂರನೆಯ ಶತಕದಲ್ಲಿ ಅಪ್ಪಣೆ ಕೊಡಿ ಸಿದರು. ನಾಲ್ಕನೆಯ ಶತಕದಲ್ಲಿ ಭಗವಂತನನ್ನು ಬಿಟ್ಟು ಪ್ರಾಪ್ಯಾಂತರವಿಲ್ಲವೆಂದು ತಮ್ಮ ಅನನ್ಯ ಪ್ರಾಪ್ಯತ್ವವನ್ನು ತಿಳಿಯಪಡಿಸಿದರು. ಐದನೆಯ ಶತಕದಿಂದ ಮೊದಲಾಗಿ ತಮ್ಮ ಅನನ್ಯೋಪಾ ಯಾದಿಗಳನ್ನು ವಿವರಿಸಿ ತಿಳಿಸಿದ್ದಾರೆ. ಹೀಗೆ ಭಗವಂತನು ಉಪಾಯವೆಂದೂ ಉಪೇಯ ನೆಂದೂ ಉಕ್ತವಾದ ಅರ್ಥಗಳನ್ನು ಇಂಥದು ಎಂದು ತಿಳಿಸಿ, ಶ್ರಿಯಃಪತಿಯಾದ ಶ್ರೀಮನ್ನಾರಾ ಯಣನ ಉಪಾಯತ್ವ ಮತ್ತು ಉಪೇಯತ್ವ ಗಳನ್ನು ಸ್ಥಾಪಿಸಲು ಪ್ರಧಾನವಾದ ಹತ್ತು ಅರ್ಥಗಳು ಇಂತಹವೆಂದು ಮುಂದಿನ ಪದ್ಯದಲ್ಲಿ ನಿರೂಪಿಸುತ್ತಾರೆ.

ಸೇವ್ಯತ್ವಾತ್ ಭೋಗ್ಯಭಾವಾಚ್ಛುಭತನು
ವಿಭವಾತ್ಸರ್ವಭೋಗ್ಯಾಧಿಕತ್ವಾತ್।
ಶ್ರೇಯಸ್ತದ್ಧೇತುದಾನಾತ್ ಶ್ರಿತ
ವಿವಶತಯಾ ಸ್ವಾಶ್ರಿತಾನಿಷ್ಟಹೃತ್ವಾತ್।
ಭಕ್ತಚ್ಛಂದಾನುವೃತ್ತೇರ್ನಿರವಧಿಕ
ಸುಹೃದ್ಭಾವತಃ ಸತ್ಪದವ್ಯಾಂ
ಸಹಾಯಾಚ್ಚ ಸ್ವಸಿದ್ಧೇಃ ಸ್ವಯಂ
ಇಹಕರಣಂ ಶ್ರೀಧರಃ ಪ್ರತ್ಯಪಾದೀ॥

ಆಳ್ವಾರವರು ಈ ಪ್ರಬಂಧದ ಪ್ರಥಮ ಶತಕ ದಲ್ಲಿ ಸೇವ್ಯತ್ವವನ್ನೂ, ದ್ವಿತೀಯ ಶತಕದಲ್ಲಿ ಭೋಗ್ಯತ್ವವನ್ನೂ, ತೃತೀಯ ಶತಕದಲ್ಲಿ ಶುಭಾ ಶ್ರಯ ದಿವ್ಯವಿಗ್ರಹವನ್ನು, ನಾಲ್ಕನೆಯ ಶತಕದಲ್ಲಿ ಭೋಗ್ಯಾಧಿಕತ್ವವನ್ನೂ, ಪಂಚಮ ಶತಕದಲ್ಲಿ ಪುರುಷಾರ್ಥ ತದುಪಾಯಹೇತುತ್ವವನ್ನೂ, ಆರ ನೆಯ ಶತಕದಲ್ಲಿ ಪ್ರಪದನ ಸುಲಭತ್ವವನ್ನೂ, ಏಳನೆಯ ಶತಕದಲ್ಲಿ ಆಶ್ರಿತಾನಿಷ್ಟನಿವೃತ್ತಿ ಕತ್ವ ವನ್ನೂ, ಎಂಟನೆಯ ಶತಕದಲ್ಲಿ ಆಶ್ರಿತಚ್ಛಂದಾನು ವರ್ತಿತ್ವವನ್ನೂ, ಒಂಬತ್ತನೆಯ ಶತಕದಲ್ಲಿ ನಿರು ಪಾಧಿಕ ಸುಹೃತ್ವವನ್ನೂ, ಹತ್ತನೆಯ ಶತಕದಲ್ಲಿ



ಡಾ॥ ಎನ್. ಅನಂತರಂಗಾಚಾರ್

ಸತ್ಪದವೀ ಸಹಾಯತ್ವವನ್ನೂ ವಿವರಿಸಿದ್ದಾರೆ. ಇಂತಹ ಕಲ್ಯಾಣಗಳನ್ನುಳ್ಳ ಶ್ರೀಮನ್ನಾರಾಯಣನು ತನ್ನನ್ನು ಪಡೆಯಲು ಉಪಾಯನೆಂದೂ ಸಿದ್ಧಾಂತ ಮಾಡಿದ್ದಾರೆ.

ಹೀಗೆ ಸೇವ್ಯತ್ವಾದಿ ಗುಣಗಳನ್ನು ಪ್ರತಿಪಾದಿಸಿ ಮುಂದೆ ಇದನ್ನು ಸಿದ್ಧಾಂತಪಡಿಸಲು ಪರತ್ವಾದಿ ಗುಣಶತಕಗಳನ್ನು ಹತ್ತು ದಶಕಗಳಲ್ಲಿ ಐಕ್ಯವಾಗಿರುವ ಸಹಸ್ರಗಾಥಾರ್ಥವನ್ನು ಸಂಗ್ರಹಿಸಲು ಹೊರಟು ಪ್ರಥಮ ಶತಕದ ಹತ್ತು ದಶಕಗಳ ಸಾರಾರ್ಥವನ್ನು ಮುಂದಿನ ಪದ್ಯದಲ್ಲಿ ಸಂಗ್ರಹಿಸಿದ್ದಾರೆ. ಪ್ರಥಮ ಶತಕದ ಸಂಗ್ರಹಾರ್ಥ ಹೀಗಿದೆ.

ಆದಾವಿತ್ಥಂ ಪರತ್ವಾದಖಿಲ
ಸಮತಯಾ ಭಕ್ತಿಸೌಲಭ್ಯಭೂಮ್ನಾ
ನಿಶ್ಶೇಷಾಗಸ್ಸಹತ್ವಾತ್ ಕೃಪಣ
ಸುಘಟನಾತ್ ಶಕ್ಯಸಂಸಾಧನತ್ವಾತ್ ।
ಸ್ವಾದುಸ್ವೋಪಾಸನತ್ವಾತ್ ಪ್ರಕೃತಿ
ಋಜುತಯಾ ಸ್ವಾತ್ಮಭೋಗ ಪ್ರದತ್ವಾತ್
ಆವ್ಯಾಜೋದಾರಭಾವಾತ್ ಅಮನುತ
ಶತಕೇ ಮಾಧವಂ ಸೇವನೀಯಂ ॥

ಸರ್ವಸ್ವಾತ್ಪರನಾಗಿರುವುದರಿಂದಲೂ, ಸರ್ವಸಮನಾಗಿರುವುದರಿಂದಲೂ, ಆಶ್ರಿತ ಸುಲಭನಾಗಿರುವುದರಿಂದಲೂ, ಸರ್ವಾಪರಾಧಸಹನಾಗಿರುವುದರಿಂದಲೂ, ಸುಶೀಲನಾಗಿರುವುದರಿಂದಲೂ, ಸ್ವಾರಾಧನಾಗಿರುವುದರಿಂದಲೂ, ಸುಖರೂಪೋಪಾಸನನಾಗಿರುವುದರಿಂದಲೂ, ಋಜುಪ್ರಕೃತಿಯಾಗಿರುವುದರಿಂದಲೂ, ಸಾತ್ವಿಕ, ಸಾತ್ಮಿಕರಾಗಿ ಅನುಭವಿಸಬೇಕಾದವನಾಗಿರುವುದರಿಂದಲೂ, ಅತ್ಯಂತೋದಾರನಾಗಿರುವುದರಿಂದಲೂ, ಭಗವಂತನ ಸೇವ್ಯನೆಂದು ಮೊದಲನೆಯ ಶತಕದಲ್ಲಿ ಆಳ್ವಾರವರು ತಿಳಿಸಿದ್ದಾರೆ.

ಇತ್ಯಭ್ರೂಶ್ರತಾತ್ಯಸಹ್ಯ
ಕ್ಷಣವಿರಹತಯಾ ಮಾನುಷತ್ವೇ ಪರತ್ವಾತ್
ಸರ್ವಾಸ್ವಾದತ್ವ ಭೂಮ್ನಾ
ವ್ಯಸನಹರತಯಾ ಸ್ವಾಶ್ರಿ ಸಂಪ್ರೀತಿಮತ್ವಾತ್।
ಪ್ರೇಮುಖ್ಯತ್ರಾಸಯೋಗಾತ್
ನಿಜಸುಹೃದವನಾನ್ಮುಕ್ತಿ ಸಾರಸ್ಯ
ದಾನಾತ್
ಕೈಂಕರ್ಯೋದ್ದೇಶ್ಯಭಾವಾತ್
ಶುಭನಿಲಯತಯಾ ಚಾತಿಭೋಗ್ಯಂ
ದ್ವಿತೀಯೇ ॥

ಕ್ಷಣಮಾತ್ರವೂ ದುಸ್ಸಹವಾಗುವ ಹಾಗೆ ಉಳ್ಳ ತನ್ನ ವಿರಹವುಳ್ಳವನಾದುದರಿಂದಲೂ, ಮನುಷ್ಯ ಸಜಾತೀಯನಾಗಿ ಅವತರಿಸಿದ್ದರೂ ಪರಾತ್ಪರನಾಗಿರುವುದರಿಂದಲೂ, ಸಮಸ್ತ ಮಧುರ ಪದಾರ್ಥಗಳ ರಸಗಳ ಭೋಗ್ಯತೆಯನ್ನುಳ್ಳವನಾಗಿರುವುದರಿಂದಲೂ, ಆಶ್ರಿತರ ವ್ಯಸನವನ್ನು ಪರಿಹರಿಸುವವನಾದುದರಿಂದಲೂ, ಆಶ್ರಿತರೊಂದಿಗೆ ಸಂಶ್ಲೇಷಿಸಿ ಅದರಿಂದ ತಾನು ವಿಶೇಷ ಪ್ರೀತನಾಗಿರುವುದರಿಂದಲೂ, ಆಶ್ರಿತರು ತನ್ನನ್ನು ಎಲ್ಲಿ ಬಿಟ್ಟು ಬಿಡುತ್ತಾರೋ ಎಂಬ ಭಯದಿಂದ ಕೂಡಿರುವನಾದುದರಿಂದಲೂ, ಆಶ್ರಿತರಾದ ಸಂಬಂಧಿಗಳ ಸಂಬಂಧಿಗಳನ್ನೂ ಸಂರಕ್ಷಿಸುವವನಾದುದರಿಂದಲೂ, ಮೋಕ್ಷಪ್ರದನಾಗಿರುವುದರಿಂದಲೂ, ಕೈಂಕರ್ಯೋದ್ದೇಶನಾಗಿರುವುದರಿಂದಲೂ, ದರ್ಶನೀಯವಾದ ತೆಂಕಣ ತಿರುಮಲೈಯಲ್ಲಿಯೇ ನಿಂತಿರುವನಾದುದರಿಂದಲೂ, ಭಗವಂತನು ಅತ್ಯಂತ ಭೋಗ್ಯವಸ್ತುವೆಂದು ದ್ವಿತೀಯ ಶತಕದಲ್ಲಿ ತಿಳಿಸಿದ್ದಾರೆ.

ಏವಂ ಸೌಂದರ್ಯಭೂಮ್ನಾ
ತನುವಿಹಿತ ಜಗತ್ಕೃತ್ಯ ಸೌಭಾಗ್ಯಯೋಗಾತ್
ಸ್ವೇಚ್ಛಾ ಸೇವ್ಯಾ ಕ್ಷತತ್ವಾತ್
ನಿಖಿಲತನುತಯೋನ್ಮಾದದಾನಾರ್ಹ
ಕಾಂತ್ಯಾ ।
ಲಭ್ಯಾರ್ಚಾ ವೈಭವತ್ವಾತ್
ಗುಣರಸಿಕಗುಣೋತ್ಕರ್ಷಣಾ ದಕ್ಷಕೃಷ್ಟ್ಯಾಶಿ
ಸ್ತುತ್ಯತ್ವಾತ್ ಪಾಪಭಂಗಾತ್
ಶುಭಸುಭಗತನುಂ ಪ್ರಾಹ ನಾಥಂ
ತೃತೀಯೇ ॥

ನಿರತಿಶಯ ಸೌಂದರ್ಯನಾಗಿರುವುದರಿಂದಲೂ, ತನ್ನ ಮುಖದಿಂದಲೇ ಜಗತ್ಸೃಷ್ಟ್ಯಾದಿಗಳನ್ನು ಮಾಡಿದವನಾಗಿ, ತಾನು ನೆನೆಸಿದ ಹಾಗೆಯೇ ಸೇವ್ಯನಾಗಿ ತಿರುಮಲೈಯಲ್ಲಿ ನಿಂತು ಕೃಪೆಮಾಡಿದವನಾದುದರಿಂದಲೂ, ಸರ್ವಶರೀರನಾಗಿರುವುದರಿಂದಲೂ, ಆಶ್ರಿತರಿಗೆ ತೃಪ್ತಿಕರವಾದ ಕಾಂತಿಯುಕ್ತವಾದ ಶರೀರವುಳ್ಳವನಾದುದರಿಂದಲೂ, ಅರ್ಚಾವತಾರ ಹೊಂದಿ ಎಲ್ಲರಿಗೂ ಸುಲಭನಾಗಿರುವುದರಿಂದಲೂ, ತನ್ನ ವಿಗ್ರಹಾದಿಗಳಲ್ಲಿ ಮೋಹಗೊಂಡವರನ್ನು ಸರ್ವೋತ್ಕೃಷ್ಟರನ್ನಾಗಿ ಮಾಡುವುದರಿಂದಲೂ, ಮನಸ್ಸು ಮೊದಲಾದ ಸರ್ವೇಂದ್ರಿಯಗಳನ್ನು ಆಕರ್ಷಿಸುವ ಸ್ವಭಾವವುಳ್ಳವನಾದುದರಿಂದಲೂ, ತಾನೊಬ್ಬನೇ ಸ್ತೋತ್ರವಿಷಯನಾಗಿರುವುದರಿಂದಲೂ, ಸರ್ವಪಾಪಗಳನ್ನೂ ಪರಿಹರಿಸವವನಾಗಿರುವುದರಿಂದಲೂ, ಭಗವಂತನು ನಿತ್ಯನಿರವದ್ಯ ನಿರತಿಶಯಯೋಜ್ವಲ ಸೌಂದರ್ಯ ಸೌಕುಮಾರ್ಯ ಲಾವಣ್ಯಯವ್ವನಾದ್ಯನೇಕ ದಿವ್ಯಗುಣರೂಪನೆಂದು ಮೂರನೆಯ ಶತಕದಲ್ಲಿ ಆಳ್ವಾರವರು ವಿವರಿಸಿದ್ದಾರೆ.

ನಿತ್ಯೈಶ್ವರ್ಯಂತು ತುರ್ಯೇ
ಸಹಜ ಬಹುಲಸದ್ಭೋಗ್ಯಮನ್ಯೋನ್ಯಸಕ್ತಂ
ಕ್ಲೇಶಾಪಾದಿಸ್ವತುಲ್ಯಂ
ಸ್ವಜನಕೃತ ಕೃತಾರ್ಥೀಕೃತಿಂ ಸ್ನೇಹಿಪ್ಸೈದ್ಯಂ।
ಸಂಯುಕ್ತಂ ಸದ್ಗುಣೌಘೈಃ
ಸ್ವಜನಪರಿಹೃತೋಪೇಕ್ಷ್ಯಮಿಷ್ಟಾರ್ಥರೂಪಂ
ಶ್ರೇಷ್ಠಂ ನಿಶ್ಶೇಷ ಭೋಗ್ಯಾದವನುತ
ದಶಕೇ ದೇವತಾ ಸಾರ್ವಭೌಮಂ ॥

ನಿತ್ಯವಾದ ಐಶ್ವರ್ಯವುಳ್ಳವನಾಗಿ ಸಹಜವಾಗಿ ಬಹುವಿಧ ಭೋಗ್ಯಗಳುಳ್ಳವನಾಗಿ, ಆಶ್ರಿತರನ್ನು ಬಿಟ್ಟು ಆಗಲದೆ ಅನ್ಯೋನ್ಯಾಸಕ್ತನಾಗಿ ವಿರಹ ಸಮಯದಲ್ಲಿ ಕ್ಲೇಶಾವಹಗಳಾದ ಸ್ವಕೀಯವೂ ಸ್ವಸದೃಶವೂ ಆದ ಪದಾರ್ಥಗಳುಳ್ಳವನೂ, ಸ್ವಾಶ್ರಿತರನ್ನು ಕೃತಾರ್ಥರನ್ನಾಗಿ ಮಾಡಬಲ್ಲವನೂ, ತನ್ನಲ್ಲಿ ಅನುರಕ್ತರಾದವರ ವಿಷಯದಲ್ಲಿ ತಾನೇ ವೈದ್ಯನಾಗಿರುವವನೂ, ಸಮೀಚೀನ ಗುಣ ವಿಶಿಷ್ಟನೂ ಸ್ವಾಶ್ರಿತರಿಂದಲೇ ಪರಿಹರಿಸಲ್ಪಟ್ಟ ಸ್ವೋಪೇಕ್ಷ್ಯ ವಸ್ತುಗಳನ್ನುಳ್ಳವನೂ, ಅಭೀಷ್ಟವಾದ ಪುರುಷಾರ್ಥರೂಪನೂ, ಸರ್ವ ದೇವತಾ ಸಾರ್ವಭೌಮನೂ, ಆಗಿರುವ ಭಗವಂತನನ್ನು ಸಮಸ್ತ ಭೋಗ್ಯವಸ್ತುಗಳಿಗಿಂತಲೂ ಅತಿಶಯವಾದ ಭೋಗ್ಯತೆವುಳ್ಳವನು, ಎಂದು ಆಳ್ವಾರವರು ಪ್ರತಿಪಾದಿಸಿದ್ದಾರೆ.

ಇತ್ಥಂ ಕಾರುಣ್ಯವಿಘ್ನಂ
ದುರಿತಹರಜನಂ ಪ್ರೇಮತೀವ್ರಂ ದುಹಾನಂ
ಲೋಕಾನಾಂ ರಕ್ಷಿತಾರಂ
ಸ್ಮೃತಿ ವಿಷಯಮಹಂ ಭಾವನಾ
ಗೋಚರಂ ಚ ।
ದೀನಾನಾಂ ಸಚ್ಛರಣ್ಯಂ
ಸ್ವರಸಕೃತ ನಿಜಪ್ರೇಕ್ಷ್ಯತಾ ವಾಂಛಿಮಾಚೇ
ಪ್ರಾಪ್ತಂ ಶಕ್ತಿಪ್ರದಂ
ಶ್ರೀಪತಿಮಿಹಶತಕೇಶ್ರೇಯಸಾಮೇಕಹೇತುಂ ॥

ನಿರವಧಿಕ ಕಾರುಣ್ಯವುಳ್ಳವನಾಗಿಯೂ, ಸ್ವಕೀಯ ಜನಗಳಿಂದ ಲೋಕದಲ್ಲಿ ದುರಿತಗಳನ್ನು ಹೋಗಲಾಡಿಸುವವನಾಗಿಯೂ, ಆಶ್ರಿತರಿಗೆ ವಿಶೇಷ ಪ್ರೇಮವನ್ನುಂಟು ಮಾಡುವನಾಗಿಯೂ, ಜಗದ್ರಕ್ಷಣಜಾಗರೂಕನಾಗಿಯೂ, ವಿಶ್ಲೇಷ ಸಮಯದಲ್ಲಿಯೂ ಮರೆಯುವುದಕ್ಕಾಗದಂತಿರುವ ದಿವ್ಯಾಭರಣ ದಿವ್ಯಾಯುವಗಳೊಡನೆ ಕೂಡಿ ಸ್ಮೃತಿವಿಷಯವಾಗಿಯೂ, ಅನುಕರಿಸಿ ಧರಿಸುವುದಕ್ಕಾಗಿ ಅಹಂಬುದ್ಧಿಯಿಂದಲೇ ಅನುಭಾವ್ಯನಾಗಿಯೂ, ಅಶರಣ್ಯಶರಣನಾಗಿಯೂ, ಆಶ್ರಿತರಿಗೆ ಸರ್ವಸ್ವವಾಗಿ ದಾಸ್ಯರಸವನ್ನನುಗ್ರಹಿಸುವವನಾಗಿಯೂ; ಅತ್ಯಂತ ಸನ್ನಿಹಿತನಾಗಿಯೂ, ಅನುಭವಪ್ರತಿಬಂಧಕವಿರೋಧಿಶಕ್ತಿಯನ್ನು ದಯಪಾಲಿಸುವವನಾಗಿಯೂ, ಆಗಿರುವ ಸರ್ವೇಶ್ವರ

ನನ್ನು ಸಕಲ ಶ್ರೇಯಸ್ಸುಗಳಿಗೂ ಪ್ರಧಾನೋಪಾಯವಾಗಿ ಆಳ್ವಾರವರು ಐಯ್ದನೆಯ ಶತಕದಲ್ಲಿ ಪ್ರತಿಪಾದಿಸಿದ್ದಾರೆ.

ಆಪತ್ಸಂರಕ್ಷಣಾದ್ಯುಪಕರಣತಯಾ
ಮೇಘಸಾವ್ಯಾದಿಭೂಮ್ನಾ
ಸ್ವಾನಾಂ ವಿಶ್ವಾಸದಾನಾತ್
ಸುರಗಣಭಜನಾಪ್ತಿವ್ಯ ದೇಶೋಪಸತ್ತ್ಯಾ ।
ಪ್ರಾಪ್ಯಾಪ್ರಾಪ್ಯತ್ವಯೋಗಾತ್
ಸ್ವಜನ ವಿಜನಯೋಃ ಸ್ವಪ್ರಪತ್ತ್ಯಸ್ಯಭಾವಾತ್
ಊಚೇ ನಾಥಂ ಶರಣ್ಯಂ
ಶ್ರುತಿಶತವಿದಿತಂ ವೆಂಕಟೇಶಂ ಶಠಾರಿಃ ॥

ಪ್ರಳಯಕಾಲದ ಆಪತ್ತಿನಲ್ಲಿ ಎಲ್ಲರನ್ನು ತನ್ನ ಉದರದಲ್ಲಿ ರಕ್ಷಿಸಿದವನಾದುದರಿಂದಲೂ, ಪ್ರತಿಪಕ್ಷನಿರಸನ ಶಕ್ತಿಯುಳ್ಳ ಶ್ರೀ ಸುದರ್ಶನ ಚಕ್ರವನ್ನು ಆಯುಧವನ್ನಾಗಿ ಧರಿಸಿರುವುದರಿಂದಲೂ, ವರ್ಷಕ ಬಲಾಹಕದ ಸ್ವಭಾವವುಳ್ಳವನಾಗಿರುವುದರಿಂದಲೂ, ಸಪ್ತತಾಲಗಳನ್ನು ಭೇದಿಸಿ ಆಶ್ರಿತರಿಗೆ ವಿಶ್ವಾಸವನ್ನುಂಟು ಮಾಡಿದವನಾದುದರಿಂದಲೂ, ದೇವತೆಗಳು ಗುಂಪು ಗುಂಪಾಗಿ ಬಂದು ಸ್ತೋತ್ರಗೈಯ್ಯುವ ಹಿರಿಮೆಯುಳ್ಳವನಾದುದರಿಂದಲೂ, ದೇವ ಮನುಷ್ಯರೆಂಬ ಭೇದವಿಲ್ಲದೆ ಎಲ್ಲರೂ ಬಂದು ಆಶ್ರಯಿಸುವುದಕ್ಕೆ ಯೋಗ್ಯವಾದ ತಿರುಮಲೈಯಲ್ಲಿ ನೆಲೆಸಿರುವುದರಿಂದಲೂ, ಆಶ್ರಿತರಿಗೆ ಪ್ರಾಪ್ಯನಾಗಿಯೂ, ಅನಾಶ್ರಿತರಿಗೆ ಅಪ್ರಾಪ್ಯನಾಗಿರುವುದರಿಂದಲೂ, ಶ್ರೀದೇವಿಯಿಂದ ಎಂದೂ ಅಗಲದೇ ಇರುವ ಸ್ವಭಾವವುಳ್ಳವನಾಗಿರುವುದರಿಂದಲೂ, ಶ್ರೀ ವೆಂಕಟೇಶನೇ ಸರ್ವಲೋಕ ಶರಣ್ಯನೆಂದು ಆರನೆಯ ಶತಕದಲ್ಲಿ ಪ್ರತಿಪಾದಿಸಿದ್ದಾರೆ.

ಶಾಠ್ಯಾಶಂಕಾ ಸಹಿಷ್ಣುಂ
ಪ್ರಶಮಿತ ಜನತಾಗರ್ಹಣಂ ಸ್ವಸ್ವರಕ್ಷಂ
ವ್ಯಾಕುರ್ವನ್ತಂ ಸ್ವರಕ್ಷಾಕ್ಷಮಮಖಿಲ
ಜನಸ್ನೇಹಿತಾಂ ದರ್ಶಯನ್ತಂ ।
ಸ್ವೀಯಾಕ್ರಂದ ಚ್ಛಿದೋತ್ಕಂ
ಸ್ಮರಣಸುವಿಶದಂ ವಿಸ್ಮಯಾರ್ಹದ್ವಿಭೂತಂ
ಸ್ತೋತ್ರೇಯುಂಜನ್ತಮಾಹ
ಸ್ತುತಿಕೃದಘಹರಂ ಸಪ್ತಮೇಽ ನಿಷ್ಟಚೋರಂ ॥

ಶಾಠ್ಯಾಶಂಕೆಯನ್ನು ವಹಿಸುವವನೂ, ಆಶ್ರಿತರ ಗರ್ಹಣೆಯನ್ನು ಹೋಗಲಾಡಿಸುವವನೂ, ತನ್ನ ರಕ್ಷಕತ್ತ್ವವನ್ನು ಪ್ರಕಾಶಪಡಿಸುವವನೂ, ತನ್ನ ಸರ್ವಜನ ಸೌಹಾರ್ದವನ್ನು ಪ್ರದರ್ಶಿಸತಕ್ಕವನೂ, ಸ್ವಾಶ್ರಿತರ ಆಕ್ರಂದನವನ್ನು ಪರಿಹರಿಸುವವನೂ, ಅವರುಗಳಿಗೆ ವಿಶದವಾಗಿ ಸ್ಮೃತಿವಿಷಯನಾದವನೂ, ಆಶ್ಚರ್ಯ ವಿಭೂತಿಕನಾಗಿರುವವನೂ, ಆಶ್ರಿತರನ್ನು ಸ್ವವಿಷಯವಾದ ಸ್ತೋತ್ರಗಳಲ್ಲಿ ನಿಯೋಜಿಸತಕ್ಕವನೂ, ಸ್ತೋತ್ರಗಳ ದುಃಖವನ್ನು ಪರಿಹರಿಸುವವನೂ ಆದ ಸ್ವಾಮಿಯನ್ನು ಸಮಸ್ತಾನಿಷ್ಟನಿವರ್ತಕನನ್ನಾಗಿ ಏಳನೆಯ ದಶಕದಲ್ಲಿ ಆಳ್ವಾರವರು ವಿವರಿಸಿದ್ದಾರೆ.

ಇತ್ಥಂ ಸೂರಿರ್ದಿದೃಕ್ಷೋಃ
ದೃಶಿವಿಷಯಮಯೈಃ ನಿಸ್ಪೃಹೈರೇವಲಭ್ಯಂ
ಸ್ವಾನಾಂ ವಿಶ್ಲೇಷ ಭೋಗ್ಯಂ
ಶ್ರುತ ವಿಹಿತ ಸಮಗ್ರತ್ವ ಭೂತಿಂ ಶಠಾರಿಃ ।
ಸ್ವಾಪೇಕ್ಷಾನಪ್ಯಪೇಕ್ಷಂ
ಸ್ವವಿತರಣಪರಂ ಹೃದ್ಗತಂ ಸ್ಪಷ್ಟಯನ್ತಂ
ದಾಸ್ಯ ದ್ವನ್ತಸ್ಯ ನಿಷ್ಠಾಂ
ತದವಧಿಮಪಿಚಾಪ್ಯಷ್ಟಮೇಽಸ್ವೇ ಷ್ಟವಶ್ಯಂ ॥

ತನ್ನನ್ನು ಕಾಣಬೇಕೆಂದು ಆಶಿಸುವವರಿಗೆ ಸುಲಭವಾಗಿ ದರ್ಶನವನ್ನೀಯುವವನೂ, ಇತರ ವಿಷಯಗಳಲ್ಲಿ ಮಗ್ನರಾಗಿರುವವರಿಗೆ ಅದೃಶ್ಯನಾಗಿರುವವನೂ, ತನ್ನ ಆಶ್ರಿತರು ವಿಶ್ಲೇಷವನ್ನು ಹೊಂದುವ ಕಾಲದಲ್ಲಿಯೂ ಅವರಿಗೆ ಭೋಗ್ಯತೆಯನ್ನು ದಯಪಾಲಿಸುವವನೂ, ಆಶ್ರಿತರಿಗಾಗಿ ಸಮಸ್ತ ವೈಭವವುಳ್ಳವನೂ, ರಕ್ಷಿಸುವ ಸಂದರ್ಭದಲ್ಲಿ ಫಲಾಪೇಕ್ಷೆಯಿಲ್ಲದವನೂ, ಸ್ವಪದವಿತರಣದಲ್ಲಿ ಸದಾಸನ್ನದ್ಧನಾಗಿರುವವನೂ, ಆಶ್ರಿತರ ಹೃದಯದಲ್ಲಿ ಸದಾನಿರತನಾಗಿರುವವನೂ, ಕುರಿತು ಪ್ರಾರ್ಥಿಸುತ್ತಿರುವವರಲ್ಲಿ ದಾಸ್ಯವನ್ನೂ ಅದರಲ್ಲಿ ನಿಷ್ಠೆಯನ್ನೂ ಅವನ ಸೀಮಾ ಪರಿಮಿತಿಯನ್ನೂ ಪ್ರಕಾಶಿಸುವವನೂ, ಆದ ಸ್ವಾಮಿಯನ್ನು ಆಶ್ರಿತೇಚ್ಛಾನುವರ್ತಿಯಾಗಿರುವವನೆಂದು ಎಂಟನೆಯ ಶತಕದಲ್ಲಿ ವಿವರಿಸಿದ್ದಾರೆ.

ಇತ್ಥಂ ಸರ್ವೈಕಬಂಧುಂ
ಚಿರಕೃತ ಕರುಣಂ ಶೀಲಸಿಂಧುಂ ಪತಿತ್ವಾತ್
ಸಂಬಂಧಾದ್ರಕ್ಷಿತಾರಂ
ಸ್ವಗುಣಗರಿಮ ಸಂಸ್ಮಾರಕಂ ಪ್ರಾಹಕೃಷ್ಣಂ ।
ವಿಸ್ಮರ್ತುಂ ಚಾಪ್ಯಶಕ್ಯಂ
ಘಟಕಮುಖ ಸುವಿಸ್ರಂಭಣೀಯಂ ಸುಮತ್ಯಾ
ಲಕ್ಷ್ಮ್ಯಾಶ್ಲಿಷ್ಟಂ ಸ್ವಸಿದ್ಧ್ಯಶ್ನನ್ಮುಖ
ಸಮಯಮನೇಹಃ ಪ್ರತೀಕ್ಷಂ ಸುಮಿತ್ರಂ ॥

ಸರ್ವರಿಗೂ ನಿರುಪಾಧಿಕ ಬಂಧುವಾದವನೂ, ಚೇತನರಲ್ಲಿ ಬಹುಕಾಲದಿಂದ ಕೃಪೆಯನ್ನು ಮಾಡಿದವನೂ, ಶೀಲಗುಣಾಕರನಾದವನೂ ಸ್ವಸ್ವಾಮಿಸಂಬಂಧದಿಂದ ಲೋಕವನ್ನು ರಕ್ಷಿಸುತ್ತಿರುವವನೂ, ಆಶ್ರಿತರು ಮರೆಯಲಾಗದಂತೆ ಸ್ವಕೀಯ ಗುಣಗಳನ್ನು ಜ್ಞಾಪಿಸುತ್ತಿರುವವನೂ, ಮರೆಯುವುದಕ್ಕೆ ಅಶಕ್ಯವಾಗುವ ಹಾಗೆ ಘಟಕ ಮುಖದಿಂದ ವಿಶ್ವಸನೀಯನಾಗಿರುವವನೂ, ಮಂಗಳಾಕರಳಾದ ಲಕ್ಷ್ಮೀದೇವಿಯ ಪತಿಯಾಗಿರುವವನೂ, ಸಮಯಾನುಸಾರ ದರ್ಶನ ಸುಲಭನಾಗಿರುವವನೂ, ಆದ ಎಂಬೆರುಮಾನನನ್ನು ಎಲ್ಲರಿಗೂ ನಿರುಪಾಧಿಕ ಸುಹೃತ್ತಾಗಿ ಒಂಬತ್ತನೆಯ ಶತಕದಲ್ಲಿ ವರ್ಣಿಸಿದ್ದಾರೆ.

ಏವಂ ಸ್ವಾನಾಂಗತಿಂವ್ಯಥ್ನಜಂ
ದುರಿತ ಹರಾಸ್ಥಾನ ಶಂಕಾರ್ಹರಾಗಂ
ಸುಪ್ರಾಪಂ ಭಕ್ತಿಭಾಜಾಂ
ಬಹುವಿಧ ಭಜನ ಪ್ರಕ್ರಿಯಂ ಶ್ರೀಶಠಾರಿಃ ।
ತೀವ್ರೋದ್ಯೋಗಂ ಸ್ವದಾನೇ
ಸ್ವಜನ ತನುಕ್ಷತಾತ್ಯಾದರಂ ಪ್ರಾಹ ಚಾನ್ತೇ
ಸ್ವೇಚ್ಛಾಭುಷ್ಟಂ ಸುಖಾರ್ಚಿಃ
ಮುಖಸರಣಿಮುಖಂಮೋಕ್ಷದಂ
ಮುಕ್ತಿಭೋಗ್ಯಮ್ ॥

ಆಶ್ರಿತರಿಗೆ ಯೋಗ್ಯನಾದ ಜೊತೆಗಾರನೂ, ಅನಿವಾರ್ಯವಾದ ಕ್ಲೇಶಗಳನ್ನು ಪರಿಹರಿಸುವವನೂ, ಸ್ಥಾನಾಂತರದಲ್ಲಿ ಶಂಕಿಸುವಂತೆ ಶಂಕೆಗೆ ಆಸ್ಪದವಿಲ್ಲದವನೂ, ತನ್ನನ್ನು ಆಶ್ರಯಿಸುವವರಿಗೆ ಸುಪ್ರಾಪ್ತನೂ, ಬಹುವಿಧವಾದ ಭಜನ ಪ್ರಕಾರವುಳ್ಳವನೂ, ಆಶ್ರಿತರಿಗೆ ಸ್ವಾತ್ಮ ಪ್ರದಾನದಲ್ಲಿ ಬಹು ತೀವ್ರತೆಯುಳ್ಳವನೂ, ಅವರ ಶರೀರದಲ್ಲಿ ಅತ್ಯಾದರವುಳ್ಳವನೂ, ಅವರ ವಿಷಯದಲ್ಲಿ ಸ್ವೇಚ್ಛೆಯಿಂದ ಸಂತುಷ್ಟನಾಗಿರುವನೂ, ಮೋಕ್ಷಪ್ರದನೂ, ಮುಕ್ತಿಪ್ರಾಪ್ಯನೂ ಆದ ಸ್ವಾಮಿಯನ್ನು ಹತ್ತನೆಯ ಶತಕದಲ್ಲಿ ಸತ್ಪದವೀಸಹಾಯಕನೆಂದು ಸ್ಥಾಪಿಸಿದ್ದಾರೆ.

ಇತ್ಥಂ ಸೇವ್ಯಂ ಸುಭೋಗ್ಯಂ
ಶುಭಸುಭಗತನುಂ ಸರ್ವ ಭೋಗ್ಯ ಪ್ರಕೃಷ್ಟಂ
ಶ್ರೇಯಸ್ತದ್ಧೇತುಭೂತಂ
ಪ್ರಪದನ ಸುಲಭಂ ಸ್ವಾಶ್ರಿತಾನಿಷ್ಟು ಜುಷ್ಟಂ ।
ಭಕ್ತಚ್ಛಂದಾನು ರಕ್ತಂ
ನಿರುಪಧಿಸುಹೃದಂ ಸತ್ಪದವ್ಯಾಂ ಸಹಾಯಂ
ಶ್ರೀಶಂ ಪ್ರಾಹ ಸ್ವಸಿದ್ಧೇಃ
ಸ್ವಯಮಿಹ ಕರಣಂ ಸ್ವಪ್ರಬಂಧೇ ಶಠಾರಿಃ ॥

ಸೇವಾಯೋಗ್ಯನಾಗಿಯೂ, ಸೇವಿಸುವುದಕ್ಕೆ ಅತ್ಯಂತ ಭೋಗ್ಯನಾಗಿಯೂ, ದಿವ್ಯಮಂಗಳ ವಿಗ್ರಹಯುಕ್ತನಾಗಿಯೂ, ಸರ್ವಭೋಗ್ಯಾತಿಶಯಿಯಾಗಿಯೂ, ಪುರುಷಾರ್ಥ ತದುಪಾಯಭೂತನಾಗಿಯೂ, ಪ್ರಪದನಸುಲಭನಾಗಿಯೂ ಆಶ್ರಿತಾನಿಷ್ಟನಿವಾರಕನಾಗಿಯೂ, ಆಶ್ರಿತೇಚ್ಛಾವರ್ತಿಯಾಗಿಯೂ, ಎಲ್ಲರಿಗೂ ನಿರುಪಾಧಿಕ ಸುಹೃತ್ತಾಗಿಯೂ, ಇರುವ ಸ್ವಾಮಿಯನ್ನು ಸ್ವಪ್ರಾಪ್ತಿಯಲ್ಲಿ ಸ್ವಯಮೇವೋಪಾಯಭೂತನೂ ಸ್ವಶರಣ್ಯನೂ ಎಂದು ಸ್ವಪ್ರಬಂಧವಾದ ತಿರುವಾಯ್

ಮೊಳಿಯಲ್ಲಿ ಆಳ್ವಾರವರು ಸಿದ್ಧಾಂತ ಮಾಡಿದ್ದಾರೆ.

ಮುಂದಿನ ಪದ್ಯದಲ್ಲಿ ಆಳ್ವಾರುವರ ನಾಲ್ಕು ಪ್ರಬಂಧಗಳಲ್ಲಿ ಉಕ್ತವಾಗುವ ವಿಷಯವನ್ನು ವಿಶದ ಪಡಿಸುತ್ತಾರೆ.

ಆದ್ಯೇ ಸ್ವೀಯೇ ಪ್ರಬಂಧೇ
ಶತಜಡಧಿದಧೇ ಸಂಸೃತೇರ್ದುಸ್ಸಹತ್ವಂ
ದ್ವೈತೀಯೀಕೇ ಸ್ವರೂಪಾದ್ಯ
ಖಿಲಮಥಶರೀರನ್ವಭೂತ್ ಸ್ಪಷ್ಟದೃಷ್ಟಂ ।
ತಾರ್ತೀಯೀಕೇ ಸ್ವಕೀಯಾಂ
ಭಗವದನುಭವೇ ಸ್ಮಾರಯಾಮಾಸ ತೀವ್ರಂ
ಅಶಾನ್ತುರ್ಯೇ ಯಥೇಷ್ಟಂ
ಭಗವದನುಭವಾದಾಪ ಮುಕ್ತಿಂ ಶಠಾರಿಃ ॥

ಆಳ್ವಾರವರು ತಮ್ಮ ಪ್ರಥಮ ಪ್ರಬಂಧ 'ತಿರುವಿರುತ್ತ'ದಲ್ಲಿ ಸಂಸಾರದ ದುಸ್ಸಹತ್ವವನ್ನು ವಿವರಿಸಿದ್ದಾರೆ. ಎರಡನೆಯದಾದ 'ತಿರುವಾಶಿರಿಯ' ದಲ್ಲಿ ಸ್ವಾಮಿಯ ಸ್ವರೂಪರೂಪಾದಿಗಳನ್ನನು ಭವಿಸಿದ್ದಾರೆ. ಮೂರನೆಯದಾದ ತಿರುವಂದಾದಿ ಯಲ್ಲಿ ಭಗವಂತನ ಅನುಭವದಲ್ಲಿ ತಮಗುಂಟಾದ ರಾಗಾತಿಶಯವನ್ನು ಪ್ರಕಾಶಪಡಿಸಿದ್ದಾರೆ. ನಾಲ್ಕನೆಯದಾದ 'ತಿರುವಾಯ್‌ಮೊಳಿ'ಯಲ್ಲಿ ತನ್ನ ಇಷ್ಟಾರ್ಥದಂತೆಯೇ ಅನುಭವಿಸಿ ಮೋಕ್ಷವನ್ನು ಹೊಂದಿದ್ದಾರೆ.

ಮುಂದಿನ ಎರಡು ಶ್ಲೋಕಗಳಲ್ಲಿ ಪ್ರಬಂಧ ದಲ್ಲಿ ಉಕ್ತವಾದ ಅರ್ಥ ವಿಶೇಷವನ್ನು ಪ್ರಕಾಶಿಸುತ್ತಾರೆ.

ಶ್ರೀಮಾನ್ ಸೀಮಾತಿಲಂಘೀ
ಸ್ಥಿರತರಕರುಣಃ ಸರ್ವವಿತ್ಸರ್ವಶಕ್ತಿಃ
ಸ್ವಾಮೀ ಸರ್ವಸ್ಯಜನ್ತೋಃ
ಸ್ವಚರಣಯುಗಳೆ ಸ್ವೀಕೃತಾಸ್ಮಾಕಭಾರಃ ।
ಕಿನ್ನಃ ಕೃತ್ಯಂ ಸ್ವಹೇತೋಃ
ಕಿಮಿಹ ನ ಸುಲಭಂ ಕಾ ವಿಪತ್ತಿರ್ಭವಿತ್ರೀ
ಕಾನ್ಯಸ್ಯಾದ್ಯವರ್ಹ್ಯಾ ವಯಮಿತಿ
ವಿದುಷಾಮಾಹ ತುಂಗತ್ವಮಸ್ಮೈ ॥

ಶ್ರಿಯಃಪತಿಯಾಗಿ, ಸರ್ವಸ್ವಾಮಿಯಾಗಿ, ನಿರವಧಿಕ ಕಾರುಣ್ಯ, ವಾತ್ಸಲ್ಯ, ಸೌಶೀಲ್ಯ, ಸೌಲಭ್ಯ ಸರ್ವಜ್ಞತ್ವ, ಸರ್ವಶಕ್ತಿತ್ವ, ಸತ್ಯಸಂಕಲ್ಪತ್ವ, ಕೃತಜ್ಞತ್ವ, ಸ್ಥಿರತ್ವ, ಪರಿಪೂರ್ಣತ್ವ, ಪರಮೋದಾರತ್ವಾದಿ ಕಳ್ಯಾಣಗುಣಗಳನ್ನುಳ್ಳ ಭಗವಂತನ ಚರಣಾರವಿಂದದಲ್ಲಿ ಆತ್ಮರಕ್ಷಾಭರಸಮರ್ಪಣ ಮಾಡಿದ ನಮ್ಮಗಳಿಗೆ ಬೇರೆ ಕರ್ತವ್ಯವೇನಿದೆ. ಕ್ಲೇಶಾಪದಾರವಾದುದು ಬೇರೆ ಯಾವುದಿದೆ. ವಾಗ್ವಿಷಯವಾವುದಿದೆ – ಎಂಬ ನಿಶ್ಚಲ ಬುದ್ಧಿಯುಳ್ಳವರು ಸರ್ವೋನ್ನತರು ಎಂದು ಚರಮ ಪ್ರಬಂಧವಾದ 'ತಿರುವಾಯ್‌ಮೊಳಿ'ಯಲ್ಲಿ ಸ್ಥಾಪಿಸಿದ್ದಾರೆ.

ಶಾಸ್ತ್ರೇ ದೇಹಾತಿರಿಕ್ತಾತ್ಮನಿ
ತದಧಿಪತೌ ತತ್ಪ್ರಸಾದಾದ್ಯುಪಾಯೇ
ತಸ್ಮಿನ್ನಿಃಶ್ರೇಯಸಾಪ್ತೌ
ತದಪಚರಣತೋಽನಂತತಾಪಾಪಿಭಾತೇ ।
ತದ್ಭಕ್ತಾನಾಂ ಪ್ರಭಾವೇ
ತದುಪಸದನ ತಸ್ಸಾಂತೆ ಕಾಲುಷ್ಯಶಾಂತೌ
ಸಾರಂ ವೈದ್ಯಂ ಸ್ವವೇದೇ
ಸಕಲ ಮಕಥಯತ್ ಸ್ವಾನುಕಂಪಂ ಶಠಾರಿಃ ॥

ಶರೀರಾತಿರಿಕ್ತನಾದ ಜೀವಾತ್ಮ, ತತ್ಪ್ರಾಪ್ಯನಾದ ಪರಮಾತ್ಮ, ತತ್ಪ್ರಾಪ್ತ್ಯುಪಾಯಗಳಾದ ಭಕ್ತಿ ಪ್ರಪತ್ತಿಗಳು, ತತ್ಫಲವಾದ ಸ್ವಚ್ಛಂದ ಕೈಂಕರ್ಯ ಪರ್ಯಂತಪರಿಪೂರ್ಣವಾದ ಭಗವದನುಭವ, ತದ್ವಿರೋಧಿಯಾದ ಪ್ರಕೃತಿಸಂಬಂಧ, ತಜ್ಜನ್ಯ ಭಗವದಪಚಾರ, ಭಾಗವತಾಪಚಾರ, ತತ್ಫಲ ಭೂತವಾದ ನರಕಾದಿ ಕ್ಲೇಶಗಳು ಇವುಗಳ ವಿಷಯವನ್ನು ತಿಳಿಸುವ ಅರ್ಥ ಪಂಚಕ ವಿಷಯಕವಾದ ಇದನ್ನು ತಿಳಿದ ಶ್ರೀ ವೈಷ್ಣವರ ಪ್ರಭಾವ ವಿಷಯಕವಾಗಿಯೂ, ತತ್ಪ್ರೀತಿಯಿಂದ ಲಭಿಸಬಹುದಾದ ಮನೋನೈರ್ಮಲ್ಯ ವಿಷಯವಾಗಿಯೂ, ಶಾಸ್ತ್ರಗಳಿಂದ ತಿಳಿದು ಬರುವ ಅತ್ಯಂತ ಸಾರವಾದ ಅರ್ಥಗಳೆಲ್ಲವನ್ನೊಳಗೊಂಡ ದ್ರಾವಿಡ ವೇದವಾದ ಈ ತಿರುವಾಯ್‌ಮೊಳಿಯ ತಾತ್ಪರ್ಯವಾದ ಈ 'ರತ್ನಾವಳಿ'ಯು ಶ್ರೀರಂಗನಾಥನಿಗೂ ಅವನ ದಾಸರಾದ ಶ್ರೀವೈಷ್ಣವರಿಗೂ ಹೃದಯ ಹರ್ಷಿಣಿಯಾಗಿರುತ್ತದೆ.

ಈ ಶತಕಾರ್ಥಗಳ ಸಾರಸಂಗ್ರಹವೇ ಅವರ ದ್ರಮಿಡೋಪನಿಷತ್ಸಾರ. ಈ ಎರಡು ಗ್ರಂಥಗಳೂ ತಿರುವಾಯ್‌ಮೊಳಿಯ ಸಾರಾರ್ಥ ಸಂಗ್ರಹ. ಅದನ್ನು ಅಭ್ಯಾಸಮಾಡುವವರಿಗೆಲ್ಲ ವೇದಾಂತ. ದೇಶಿಕರ ಈ ಎರಡು ಗ್ರಂಥಗಳೂ ಪರಮಗ್ರಾಹ್ಯವೂ ಭೋಗ್ಯತಮವೂ ಆಗಿದೆ.

ಇತ್ಥಂ ಸತ್ಸಂಪ್ರದಾಯ
ಕ್ರಮಸಮಧಿಗತಾಶೇಷವರ್ಣಾರ್ಹವೇದ
ಶ್ರದ್ಧಾ
ಶುದ್ಧಾಶಯಾನಾಂ ಅಘಟಯದನಘಂ
ಕೌತುಕಂ ವೇಂಕಟೇಶಃ ।
ಸಮ್ಯಕ್ತ್ವೇತಸ್ಯ ಸಾಕ್ಷಾತ್
ಶಠರಿಪುರಥವಾ ಸರ್ವಸಾಕ್ಷೀ ಸಸಾಕ್ಷೀ
ಸಾವದ್ಯತ್ವೇಪಿ ಸೋಢುಂ
ಪ್ರಭವತಿ ಭಜತಾ ಪ್ರಕಂಪ್ಯಾನುಕಂಪಃ ॥

ಸತ್ಸಂಪ್ರದಾಯ ಪರಂಪರೆಯಿಂದ ಸಮಧಿಗತವಾಗಿ ಸರ್ವವರ್ಣಯೋಗ್ಯವಾದ 'ತಿರುವಾಯ್‌ಮೊಳಿ'ಯಲ್ಲಿ ರುಚಿಯುಳ್ಳವರಾಗಿ ಅದರಿಂದ ಪರಿಶುದ್ಧ ಮನಸ್ಕರಾದ ಶ್ರೀವೈಷ್ಣವರಿಗೆ ಈ ವ್ಯಾಖ್ಯಾನದಲ್ಲಿ ವೆಂಕಟನಾಥ ದೇಶಿಕರು ವಿಶೇಷ ಸಂತೋಷವನ್ನುಂಟು ಮಾಡಿದ್ದಾರೆ. ಇತರ ಸಮೀಚೀನವಾದ ವೈಭವಕ್ಕೆ ಎಂಬೆರುಮಾನನೇ ಸಾಕ್ಷಿ. ಆಳ್ವಾರರೇ ಸಾಕ್ಷಿ. ಅದನ್ನು ಕೊಂಡಾಡುವ ಭಾಗವತರೇ ಸಾಕ್ಷಿ. 

# ಈಶ್ವರ ತತ್ತ್ವ

ಶ್ರೀ ಡಿ. ಕೃಷ್ಣ ಅಯ್ಯಂಗಾರ್

ತತ್ತ್ವ ಎಂದರೆ ಕಲ್ಪಿತವಲ್ಲದಿರುವ ಪ್ರಾಮಾಣಿಕ ವಸ್ತು. ವಸ್ತುಸ್ವಭಾವವಿಚಾರವೇ ತತ್ತ್ವವಿಚಾರ. ಪ್ರತಿಯೊಂದು ವಸ್ತುವಿಗೂ ಒಂದು ಹೆಸರಿದೆ. ಇಂತಹ ಹೆಸರಿನಿಂದ ತಿಳಿಯಲ್ಪಡುವ ವಸ್ತುಗಳೇ ಪದಾರ್ಥ. ಆದುದರಿಂದ ಪದಾರ್ಥ ವಸ್ತು, ತತ್ತ್ವ ಎಲ್ಲವೂ ಒಂದೇ ಅರ್ಥ ಸೂಚಿಸುತ್ತವೆ. ಪದಾರ್ಥಸಂಶೋಧನಾ ವಿಚಾರ ಎಂದರೆ ತತ್ತ್ವವಿಚಾರ.

ಪ್ರಪಂಚದ ವಸ್ತುಗಳಲ್ಲಿ ಕೆಲವು ಪ್ರತ್ಯಕ್ಷ, ಇನ್ನು ಕೆಲವು ಪರೋಕ್ಷ. ಇಂತಹ ಪ್ರತ್ಯಕ್ಷ ಪರೋಕ್ಷವಾದ ಸಕಲ ವಸ್ತುಗಳ ವಿಚಾರವೇ ತತ್ತ್ವಮಾರ್ಗ. ಇದರಲ್ಲಿ ವಿಚಿತ್ರ ಪ್ರಪಂಚದ ಮೂಲತತ್ತ್ವಗಳು ಯಾವುವು? ಅವು ಹೇಗಿರುವುವು? ಅದು ಒಂದೇ? ಅನೇಕವೋ? ಇವುಗಳಿಂದ ನಮಗೆ ಸುಖವೇ? ದುಃಖವೇ? ನಾನು ಎಂಬುದು ಎಂತಹ ವಸ್ತು? ಅದನ್ನು ತಿಳಿಯುವುದಕ್ಕೆ ಬೇಕಾದುದೇನು? ತತ್ತ್ವ ಮಾರ್ಗ ಎಂದರೆ ಈಶ್ವರನ ವಿಚಾರ ತಿಳಿಯುವುದು ಎಂದು ಅರ್ಥಮಾಡಬಹುದು. ಇದನ್ನು ತತ್ತ್ವ ದರ್ಶನ ಎಂದೂ ಕರೆಯಲಾಗಿದೆ. ರಾಮಾನುಜ ದರ್ಶನ ರೀತಿಯಾಗಿ ಈಶ್ವರ ಎಂದರೆ ಶ್ರೀಮನ್ನಾರಾಯಣ, ಸರ್ವೇಶ್ವರ, ಪರಮಾತ್ಮ ಪರಬ್ರಹ್ಮ – ಎಂದು ಹೇಳುವುದು ರೂಢಿಯಲ್ಲಿದೆ.

ಜಗತ್ತಿನ ಪದಾರ್ಥಗಳ ಸ್ವರೂಪ, ಸ್ಥಿತಿ, ಪ್ರವೃತ್ತಿ, ನಿವೃತ್ತಿಗಳೆಲ್ಲವೂ ಯಾರ ಅಧೀನಕ್ಕೆ, ಯಾರ ಸಂಕಲ್ಪಕ್ಕೆ ಒಳಪಡುವುದೋ ಅವನು ಸರ್ವೇಶ್ವರ. ಚಿದಚಿದ್ವಿಲಕ್ಷಣನಾದ, ಪರಮ ಚೇತನವಾಗಿರುವ ಈಶ್ವರನಲ್ಲಿಯೇ ಈ ಲಕ್ಷಣವು ಸಂಭವಿಸುವುದರಿಂದ ಅವನೇ ಸರ್ವೇಶ್ವರನೆನ್ನಿಸಿ ಕೊಳ್ಳುವನು.

ಸ್ವವ್ಯತಿರಿಕ್ತವಾದ ಸಮಸ್ತ ದ್ರವ್ಯಗಳೊಡನೆ ಸಂಯೋಗ ಪಡೆದು, ಅಪೃಥಕ್ಸಿದ್ಧ ಸಂಬಂಧದಿಂದ ಜ್ಞಾನಹೊಂದಿರುವ ದ್ರವ್ಯವೇ ಈಶ್ವರತತ್ತ್ವ. ಸಮಸ್ತ ಪದಾರ್ಥಗಳಿಗೆ ಯಾವುದು ಶೇಷಿಯೋ ಅದು ಈಶ್ವರತತ್ತ್ವ. ಜೀವನು ಕೆಲವು ಪದಾರ್ಥಗಳಿಗೆ ಶೇಷಿಯಾಗಿರಬಹುದು. ಸಮಸ್ತ ಪದಾರ್ಥಗಳಿಗೆ ಶೇಷಿಯಾಗಿರಲಾರನು. ಶಾಸ್ತ್ರವಿಹಿತ ಕರ್ಮಗಳಿಂದ ಉಂಟಾಗುವ ಮೇರೆಗೆ ಯಾವನು ಆಶ್ರಯಭೂತನೋ ಅವನು ಈಶ್ವರನು. ಸಕಲ ಕರ್ಮಗಳಲ್ಲಿ, ಅಗ್ನಿ ಇಂದ್ರಾದಿ ದೇವತೆಗಳ ಮೂಲಕ ಅರಾಧಿಸಲ್ಪಟ್ಟವನೆಂದು ತೋರಿದರೂ, ಕೊನೆಗೆ ಆಯಾಯಾ ದೇವತೆಗಳಿಗೆ ಅಂತರ್ಯಾಮಿಯಾಗಿ ಶರೀರಿ ಎನಿಸಿಕೊಂಡ ಈಶ್ವರನೇ ಸಕಲ ಕರ್ಮಸಮಾರಾಧ್ಯನೆಂದು ವ್ಯಕ್ತವಾಗಿರುವುದು. ಇದನ್ನು "ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವಚ" ಎಂದು ಭಗವಂತನೇ ಗೀತೆಯಲ್ಲಿ ತಿಳಿಸಿದ್ದಾನೆ.

ಯಾವನು ಸಕಲಫಲಪ್ರದನಾಗಿ ಸ್ವವ್ಯತಿರಿಕ್ತವಾದ ಸಮಸ್ತ ಪದಾರ್ಥಗಳಿಗೂ ಆಧಾರವಾಗಿರುವನೋ ಅವನೇ ಸರ್ವೇಶ್ವರನು. ಹೀಗೆಯೇ ಎಲ್ಲ ಕಾರ್ಯಗಳಲ್ಲಿರುವ ಕಾರ್ಯತ್ವಧರ್ಮದಿಂದ ನಿರೂಪಿಸಲ್ಪಟ್ಟ ಕಾರಣತ್ವಕ್ಕೆ ಆಶ್ರಯನಾಗಿರುವವನು ಈಶ್ವರನು. ತಾನು ಮತ್ತು ತನ್ನ ಧರ್ಮಭೂತಜ್ಞಾನ, ಇವೆರಡನ್ನು ಬಿಟ್ಟು ಉಳಿದ ಸಮಸ್ತ ದ್ರವ್ಯಗಳಿಗೂ ಯಾವನು ಶರೀರವಾಗಿರುವನೋ, ಅವನು ಈಶ್ವರನು. ಯಾರ ಸಂಕಲ್ಪವು ಅಪ್ರತಿಹತವಾಗಿರುವುದೋ, ಯಾರಿಗೆ ಪಾಪಸಂಬಂಧವಿಲ್ಲವೋ ಅವನು ಈಶ್ವರನು.

ಸಂಸಾರಬಂಧದಿಂದ ನಿವೃತ್ತಿ ಹೊಂದಿ ಬ್ರಹ್ಮಾನಂದ ಪಡೆಯಬೇಕೆಂದು ಅಪೇಕ್ಷಿಸುವ ಜೀವಾತ್ಮರಿಗೆ, ಯಾರು ಉಪಾಸ್ಯನಾಗಿರುವನೋ ಅವನು ಸರ್ವೇಶ್ವರನು. ಮುಕ್ತಾತ್ಮರಿಗೆ ಯಾರು ಪ್ರಾಪ್ಯನಾಗಿ ಅವರಿಂದ ಸರ್ವತೋಮುಖವಾದ ಕೈಂಕರ್ಯಗಳನ್ನು ಅಂಗೀಕರಿಸುವನೋ ಅವನು ಈಶ್ವರನು. ಇಂತಹ ಕೈಂಕರ್ಯಕ್ಕೆ ವಿಘ್ನ ಬಾರದಂತೆ ಜ್ಞಾನವೃದ್ಧಿ ಪಡಿಸಿ ಶುದ್ಧಸತ್ವಮಯನಾಗಿ ಪರಮಪದಕ್ಕೂ, ನಿತ್ಯಸೂರಿಗಳಿಗೂ, ಸಮಸ್ತ ಮುಕ್ತಾತ್ಮರಿಗೂ ಯಾರು ಸ್ವಾಮಿಯಾಗಿರುವನೋ ಅವನೇ ಈಶ್ವರನು. ಇಂತಹ ಅನೇಕ ಲಕ್ಷಣಗಳು ಈಶ್ವರ ತತ್ತ್ವದಲ್ಲಿವೆ.

ಜಗತ್ಕಾರ್ಯನಿರ್ವಹಣವೆಂಬ ಲೀಲೆಯನ್ನು ನಡೆಸುವುದಕ್ಕೋಸ್ಕರ ಶ್ರೀಮನ್ನಾರಾಯಣನು ವಿಷ್ಣುವೆಂಬ ಹೆಸರಿನಿಂದ ಅವತರಿಸುವನೆಂದು ಅಥರ್ವಶಿಖೋಪನಿಷತ್ತು ತಿಳಿಸುವುದೇ ವಿನಹ ನಾರಾಯಣನಿಗೆ ಉತ್ಪತ್ತಿ ಹೇಳುವುದಿಲ್ಲ. ಬ್ರಹ್ಮ, ರುದ್ರ, ಇಂದ್ರಾದಿಗಳೆಲ್ಲ ಕರ್ಮವಶ್ಯರು ಮತ್ತು ಬದ್ಧಕೋಟಿಯಲ್ಲಿ ಸೇರಿರುವರು. ಅವತಾರಕಾಲಗಳಲ್ಲಿ ಪರಮಾತ್ಮನಿಗೆ ಉಂಟಾಗುವ ದುಃಖಾನುಭವವು ಬರೀ ನಟನೆಯಲ್ಲದೆ ವಾಸ್ತವವಲ್ಲ. "ಅಜಾಯಮಾನೋ ಬಹುಧಾ ವಿಜಾಯತೇ, ಖಲು ಶ್ರೇಯಾನ್ ಭವತಿ ಜಾಯಮಾನಃ'', "ಧರ್ಮ ಸಂಸ್ಥಾಪನಾರ್ಥಾಯ'', "ನ ಮೇ ಪಾರ್ಥಾಸ್ತಿ ಕರ್ತವ್ಯಂ", ''ಇಚ್ಛಾ ಗೃಹೀತ ಅಭಿಮತೋರು ದೇಹಃ'' – ಇತ್ಯಾದಿ ವಾಕ್ಯಗಳು ಇದನ್ನು ವ್ಯಕ್ತಪಡಿಸುವುವು. ಹೀಗೆ ಶ್ರೀಮನ್ನಾರಾಯಣನಿಗೆ, ಸ್ವರಸ್ವಾತ್ರತ್ವವೂ, ಜಗತ್ಕಾರಣತ್ವವೂ, ಮುಮುಕ್ಷೂಪಾಸ್ಯತ್ವವೂ, ಸರ್ವಾಂತರ್ಯಾಮಿತ್ವವೂ ಸಂಭವಿಸುವುದೆಂಬುದನ್ನು ಶ್ರುತಿ, ಸ್ಮೃತಿ, ವಾಕ್ಯಗಳು ನಿರೂಪಿಸುವುವು.

ಶ್ರೀಮನ್ನಾರಾಯಣನೇ ಈಶ್ವರತತ್ತ್ವ ಎಂಬುದನ್ನು ಸ್ಥಿರೀಕರಿಸಲು ಪೂರ್ವಾಚಾರ್ಯರು ಒಂದು ಶ್ಲೋಕವನ್ನು ಉದಹರಿಸಿದ್ದಾರೆ.

ಕಸ್ತ್ವಂ ತತ್ತ್ವವಿದಸ್ಮಿ  
ಪರಮಂ ಕಿಂ ತರ್ಹಿ ವಿಷ್ಣುಃ ಕಥಂ।  
ತತ್ವೇದಂ ಪರತೈತ್ತಿರೀಯಮುಖಾ  
ತ್ರಯ್ಯಂತಸಂದರ್ಶನಾತ್  
ಅನ್ಯಾ ಸ್ತರ್ಹಿ ಗಿರಃ ಕಥಂ  
ಗುಣವತಾ ತತ್ರಾಹಿ ರುದ್ರಃ ಕಥಂ।  
ತದೃಷ್ಟ್ಯಾ ಕಥಮುದ್ಭವತ್ಯ  
ಪರತತ್ತ್ವನ್ಯಥಂ ನೀಯತಾ ॥

ಕಸ್ತ್ವಂ – ನೀನು ಯಾರು?

ತತ್ತ್ವವಿದಸ್ಮಿ – ತತ್ತ್ವವನ್ನು ತಿಳಿದವನು.

ವಸ್ತು ಪರಮಂ ಕಿಂ ತರ್ಹಿ – ಉತ್ಕೃಷ್ಟವಾದ ತತ್ತ್ವವು ಯಾವುದು?

ವಿಷ್ಣುಃ – ವ್ಯಾಪಕ ಗುಣ ವಿಶಿಷ್ಟನಾದ ನಾರಾಯಣನು ಉತ್ಕೃಷ್ಟ ತತ್ತ್ವವು.

ಕಥಂ – ಇದನ್ನು ನಿಷ್ಕರ್ಷಿಸುವುದು ಹೇಗೆ? ಕೇವಲ ತತ್ತ್ವನಿರ್ಣಯಕ್ಕಾಗಿಯೇ ಹೊರಟಿರುವ ನಾರಾಯಣಾನುವಾಕದಲ್ಲಿ.

"ಸಹಸ್ರ ಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವ ಶಂಭುವಂ ವಿಶ್ವಂ ನಾರಾಯಣಂ ದೇವಂ ಅಕ್ಷರಂ ಪರಮಂ ಪ್ರಭುಂ'' ಇತ್ಯಾದಿ ವಾಕ್ಯಗಳಿಂದ ಸಕಲ ವಿದ್ಯಾ ಪ್ರಕರಣಗಳಲ್ಲಿ ಪ್ರತಿಪಾದ್ಯನಾಗಿರುವ ಪುರುಷನನ್ನು ಆಯಾಯಾ ಶಬ್ದಗಳಿಂದ ಜ್ಞಾಪಕ ಪಡಿಸಿ, ಅವನಲ್ಲಿ ಪುನಃ ಪುನಃ ನಾರಾಯಣ ತತ್ತ್ವವನ್ನು ಅಭ್ಯಾಸರೂಪವಾಗಿ ಹೇಳಿರುವುದು. ಪರವಿದ್ಯಾಪ್ರಕರಣಗಳಲ್ಲಿ ಎಲ್ಲೆಲ್ಲಿ ಪರತತ್ವ, ಪರಬ್ರಹ್ಮ ಪರಂಜ್ಯೋತಿ, ಪರಮಾತ್ಮಾ – ಎಂಬ ಶಬ್ದಗಳು ಪ್ರಯೋಗಿಸಲ್ಪಟ್ಟಿರುವುವೋ ಅಲ್ಲಲ್ಲಿ

ನಾರಾಯಣನೇ ಪ್ರತಿಪಾದ್ಯನಾಗಿರುವನು ಎಂದು ನಿಶ್ಚಯಿಸಲಾಗಿದೆ.

ಅನ್ಯಾಸ್ತರ್ಹಿ ಕಥಂ– ಶ್ರೀಮನ್ನಾರಾಯಣನೇ ಸರ್ವೋತ್ಕೃಷ್ಟನೆಂದು ನಿಶ್ಚಯಿಸಿಬಿಟ್ಟರೆ "ಇಂದ್ರೋ ಮಾಯಾಭಿಃ ಪುರುರೂಪ ಈಯತೇ ನಸನ್ನ ಚಾಸಚ್ಛಿವ ಏವ ಕೇವಲಃ" – ಇಂದ್ರ ರುದ್ರಾದಿಗಳನ್ನು ತತ್ತ್ವವಾಗಿ ಉಪಯೋಗಿಸಿರುವ ವಾಕ್ಯಗಳ ಗತಿಯೇನು ?

ಗುಣವಶಾತ್ – 'ಇದಿ ಪರಮೈಶ್ವರ್ಯೇ' ಎಂಬ ಧಾತುವಿನಿಂದ ಹುಟ್ಟಿದ ಇಂದ್ರ ಶಬ್ದವೂ, ಪರಮೈಶ್ವರ್ಯವುಳ್ಳ ನಾರಾಯಣನನ್ನೇ ಹೇಳುವುದು. ಮಂಗಳತ್ವವನ್ನು ಸೂಚಿಸುವ ಶಿವ ಶಬ್ದವೂ ನಾರಾಯಣನನ್ನೇ ಹೇಳುವುದು. ಈ ಅರ್ಥವನ್ನು ಅಂಗೀಕರಿಸಿದರೆ ಇಂದ್ರ, ಶಿವಾದಿ ಪದಗಳನ್ನು ಹೊಂದಿರುವ ವಾಕ್ಯಗಳಿಗೆ ಯಾವ ಅನುಪಪತ್ತಿಯೂ ಇರುವುದಿಲ್ಲ.

ಅತ್ರಾಹ ಕಥಂ – ಶ್ರೀಮನ್ನಾರಾಯಣನೇ ಜಗತ್ಕಾರಣನೆಂದು ಹೇಳುವುದು ನ್ಯಾಯವಾಗಿದ್ದರೂ, ಅಥರ್ವಶಿರಸ್ಸಿನಲ್ಲಿ "ಅಹಮೇವ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ" ರುದ್ರನೇ ಜಗತ್ಕಾರಣನೆಂದು ನಿರ್ದೇಶನ ಮಾಡಿಲ್ಲವೇ ? ಇದು ಹೇಗೆ ಸಂಗತ ?

ತದ್ದೃಷ್ಟ್ಯಾ – ರುದ್ರನು ತನ್ನ ಶರೀರದಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಅನುಸರಿಸಿ 'ಅಹಂ' ಶಬ್ದಪ್ರಯೋಗ ಮಾಡಿರುವುದರಿಂದ ಈ ವಾಕ್ಯಕ್ಕೆ ಅನುಪಪತ್ತಿ ಇಲ್ಲ.

ಕಥಮುದ್ಭವತಿ–"ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸರ್ವೇ ಸಂಪ್ರಸೂಯಂತೇ" ವಾಕ್ಯದಂತೆ ಬ್ರಹ್ಮ ರುದ್ರ ಇಂದ್ರರಿಗೆ ಸಮಾನವಾಗಿ ಇವನಿಗೂ ಉತ್ಪತ್ತಿ ಹೇಳುವುದು ಹೇಗೆ ಸಂಗತವಾದೀತು ?

ಅವತರತಿ – ವಿಷ್ಣುವಿಗೆ ಇಲ್ಲಿ ಹೇಳಿರುವ ಉತ್ಪತ್ತಿ ಕರ್ಮವಶ್ಯರಾದ ಬ್ರಹ್ಮರುದ್ರಾದಿಗಳ ಉತ್ಪತ್ತಿಯಂತೆ ಕರ್ಮಾಧೀನವಾಗಿ ಬಂದುದಲ್ಲ. ಸುಖದುಃಖ ಭೋಗಕ್ಕಾಗಿ ಬಂದುದಲ್ಲ. ಸ್ವಸಂಕಲ್ಪದಿಂದ ಲೋಕೋಜ್ಜೀವನಕ್ಕಾಗಿ ಮಾಡಿದ ಅವತಾರರೂಪವಾಗಿರುವುದು. ಆದುದರಿಂದ ತತ್ತ್ವವೆನಿಸಿಕೊಂಡ ಶ್ರೀಮನ್ನಾರಾಯಣನಿಗೆ ಉತ್ಪತ್ತಿ ದೋಷವಿಲ್ಲ.

ಅನ್ಯತ್ರಕಥಂ – ನಾರಾಯಣನೇ ಈಶ್ವರ ತತ್ತ್ವ, ಅವನೇ ಜಗತ್ಕಾರಣ, ಅವನೇ ಪರಬ್ರಹ್ಮ ಎಂದು ಹೇಳಿದರೆ, ಶ್ವೇತಾಶ್ವತರ ಉಪನಿಷತ್ತಿನಲ್ಲಿ ಮಹೇಶ್ವರಾದಿ ಶಬ್ದಗಳಿಂದ ಬ್ರಹ್ಮತ್ವ ಹೇಳುವ ವಾಕ್ಯಗಳ ಗತಿಯೇನು ?

ನೀಯತಾಂ – ಪುರುಷಸೂಕ್ತವನ್ನು ನೆನಪಿಗೆ ತರುವ ಅನೇಕ ಪದಗಳು ಈ ಉಪನಿಷತ್ತಿನಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ ಆವುಗಳನ್ನು ಅನುಸರಿಸಿ ಶಿವ, ಮಹೇಶ್ವರಾದಿ ಪದಗಳಿಗೆ ನಾರಾಯಣನಲ್ಲಿ ಪರ್ಯವಸಾನ ಹೇಳಿ ನಿರ್ವಹಿಸಬೇಕು.

ಹೀಗೆ ಒಟ್ಟಿನಲ್ಲಿ ಪರಮಕಾರಣಿಕತ್ವವೂ, ಮುಮುಕ್ಷೂಪಾಸ್ಯತ್ವವೂ, ಸರ್ವಾಂತರ್ಯಾಮಿತ್ವವೂ ಶ್ರೀಮನ್ನಾರಾಯಣನಿಗೇ ಸಲ್ಲುವುದು. ಇನ್ನಾರಿಗೂ ಸಲ್ಲುವುದಿಲ್ಲ. ಅವನೇ ಈಶ್ವರತತ್ತ್ವ ಎಂದು ಪ್ರಮಾಣಾಧಾರಗಳಿಂದ ನಿಶ್ಚಯಿಸಲ್ಪಟ್ಟಿದೆ. ಆದುದರಿಂದಲೇ ಪರಬ್ರಹ್ಮನನ್ನು ಸತ್ಯಸ್ಯ ಸತ್ಯಂ ಎಂದು ಹೇಳಲಾಗಿದೆ.

–(ಸಶೇಷ)

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ನಾರಾಯಣನಿಗೆ ನಮಿಸುವ ಸೂರ್ಯನಾರಾಯಣ

ನಮಗೆ ಮುಕ್ಕೋಟಿ ದೇವತೆಗಳು ಇದ್ದಾರೆ. ದೇವಾದಿದೇವತೆಗಳು ಇದ್ದಾರೆ. ಆದರೆ ಅವರು ಸಾಮಾನ್ಯರಾದ ನಮಗೆ ಕಾಣಿಸುವುದಿಲ್ಲ. ಉಪಾಸಕರಿಗೆ, ಕರ್ಮ ಬಂಧಗಳನ್ನು ಬಿಟ್ಟು ಸೇವಿಸಿದವರಿಗೆ, ಭಕ್ತರಿಗೆ ಅನುಗ್ರಹ ಮಾಡುತ್ತಾರೆ. ಆದರೆ ಎಲ್ಲರಿಗೂ ಪ್ರತ್ಯಕ್ಷನಾದ ಮೂರ್ತಿ ಸೂರ್ಯನೊಬ್ಬನೇ. ಆದ್ದರಿಂದ ಅವನು ಪ್ರತ್ಯಕ್ಷದೈವ. ನಮ್ಮ ಕರ್ಮಗಳಿಗೆ ಸಾಕ್ಷಿ ಅವನೇ. ನವಗ್ರಹಾಧಿಪತಿ ಅವನೇ.

ಋಗ್ವೇದದ ಕವಿ– ಋಷಿಗಳು ಸೂರ್ಯನನ್ನು 'ನಭದ ಸ್ವರ್ಣಾಭರಣ' ಎಂದು ಹಾಡಿದ್ದಾರೆ. "ಚಿನ್ನದ ತಲೆಗೂದಲಿನಿಂದ ಪ್ರಕಾಶಮಾನನಾಗಿ, ಜನರನ್ನು ಎಚ್ಚರಿಸುತ್ತಾ, ಕಾರ್ಯೋನ್ಮುಖರಾಗಲು ಪ್ರಚೋದಿಸುತ್ತಾ, ಇರುಳ ಕರಿಯುಡಿಗೆ ಕಳೆದಿರಲು, ನಕ್ಷತ್ರಗಳು ಕಳೆಗುಂದಿ, ಕಳ್ಳರಂತೆ ಓಡುತ್ತಿರಲು, ನಭದ ಸ್ವರ್ಣಾಭರಣ ದೂರ ದೂರಕ್ಕೆ ಹೊರಡುತ್ತಾನೆ ಸಂಜೆಯಲ್ಲಿ ತನ್ನ ರಥದ ಕುದುರೆಗಳನ್ನು ಬಿಚ್ಚಿ, ಎಲ್ಲರೂ ಕೆಲಸ ನಿಲ್ಲಿಸಲು ಆಜ್ಞಾಪಿಸಿ, ಕತ್ತಲು ಬರುವಂತೆ ಮಾಡುತ್ತಾನೆ" – ಎಂದು ಋಗ್ವೇದದಲ್ಲಿ ಒಂದು ಸೂಕ್ತ ಹೇಳುತ್ತದೆ. ಸೂರ್ಯ ಮತ್ತು ಇತರ ದೇವತೆಗಳಿಗೆ ಅಭೇದವುಂಟು. ಅಗ್ನಿ ಸೂರ್ಯನಿಂದ ಕಳಿಸಲ್ಪಟ್ಟ ದೂತ. ಪುರಾಣಕಾಲದಲ್ಲಿ ಬಹು ಪ್ರಧಾನ ದೇವತೆಯಾದ ವಿಷ್ಣುವೂ ಒಬ್ಬ ಆದಿತ್ಯನೇ. ಸೂರ್ಯನ ಮೂರು ಅವಸ್ಥೆಗಳೇ (ಉದಯ ಕಾಲ, ಮಧ್ಯಾಹ್ನಕಾಲ, ಮತ್ತು ಸಾಯಂ ಕಾಲ) ವಿಷ್ಣುವಿನ ತ್ರಿವಿಕ್ರಮ ಅವತಾರಕ್ಕೆ ಮೂಲವಾದ ಕಥೆ ಎಂದು ಹೇಳುವವರೂ ಉಂಟು. ಸೂರ್ಯನೇ ನಾರಾಯಣನೆಂಬ ಭಾವನೆ ಸೂರ್ಯನಾರಾಯಣ ಎಂಬ ಹೆಸರಿಗೆ ಕಾರಣ. ಗೀತೆಯಲ್ಲಿ ಕೃಷ್ಣ ಈ ಮಾತನ್ನು ಸಮರ್ಥಿಸಿದ್ದಾನೆ.

ಆದಿತ್ಯಾನಾಮಹಂ ವಿಷ್ಣುಃ
ಜ್ಯೋತಿಷಾಂ ರವಿರಂಶುಮಾನ್
ಮರೀಚಿಃ ಮರುತಾಮಸ್ಮಿ
ನಕ್ಷತ್ರಾಣಾಮಹಂ ಶಶೀ" 10–21

ಬಹುದೇವತಾವಾದವನ್ನು ಒಪ್ಪಿಕೊಂಡರೆ ಸೂರ್ಯ ಪ್ರತ್ಯೇಕ ದೇವರಾಗುತ್ತಾನೆ. ವಿರಾಟ್ಪುರುಷನ ಕಣ್ಣು ಸೂರ್ಯನಾಗುತ್ತಾನೆ.

ಚಂದ್ರಮಾ ಮನಸೋ ಜಾತಃ
ಚಕ್ಷೋಃ ಸೂರ್ಯೋಽಜಾಯತ

ಎಂದು ಪುರುಷ ಸೂಕ್ತ ಹೇಳುತ್ತದೆ. ಏನಾದರೂ ಮಹಿಮಾನ್ವಿತನಾದ ಸೂರ್ಯನಾರಾಯಣನು ವೇದನಾರಾಯಣ ಮೂರ್ತಿಯನ್ನು ಕೃತಯುಗದಿಂದ ಈ ದಿನವರೆಗೂ ಸೇವಿಸುವ ವೃತ್ತಾಂತವು ಆಶ್ಚರ್ಯವೇ.



ಆ ವೇದನಾರಾಯಣನು ನೆಲೆಗೊಂಡಿದ್ದ ಕ್ಷೇತ್ರ ನಾಗಲಾಪುರ. ನಾಗಲಾಪುರದ ಪ್ರಸಿದ್ಧಿಗೆ ಮೂರು ಕಾರಣಗಳು. ಒಂದು ಪುರಾಣ ಪ್ರಸಿದ್ಧಿ. ಸೋಮುಕಾಸುರನು ವೇದಗಳನ್ನು ಕದ್ದುಕೊಂಡು ಹೋದಾಗ ನಾರಾಯಣನು ಮತ್ಸ್ಯನಾಗಿ ವೇದರಕ್ಷಣೆ ಮಾಡಿದ ಪ್ರಸಿದ್ಧಿ ಈ ಊರಿಗೆ ಉಂಟು. ಆದ್ದರಿಂದ ಈ ದೇವರಿಗೆ ವೇದನಾರಾಯಣನೆಂದು ಹೆಸರು. ಮತ್ತೊಂದು ಕರ್ನಾಟಕ ಸಾರ್ವಭೌಮನಾದ ಶ್ರೀಕೃಷ್ಣದೇವರಾಯ ನಿರ್ಮಿಸಿದ ಪುರವಿದು. ರಾಯನ ತಾಯಿಯ ಹೆಸರು ನಾಗಲಾದೇವಿ. ಆಕೆ ಸಾಮಾನ್ಯ ಸ್ತ್ರೀ. ವೇದನಾರಾಯಣಪುರದಲ್ಲಿ ಇದ್ದಳು. ಒಂದೊಮ್ಮೆ ತುಳುವ ನರಸರಾಯನು ನಾಗಲಾಪುರಕ್ಕೆ ಬಂದನು. ನಾಗಲಾದೇವಿ ಪರಿಚಾರಿಕೆ ಆದಳು. ಆಕೆ ಅಪ್ರತಿಮ ಸುಂದರಿ. ಆದ್ದರಿಂದ ನರಸರಾಯನ ಪತ್ನಿ ಆದಳು. ರಾಯನಿಗೆ ತಾಯಿ ಆದಳು. ಒಂದೊಮ್ಮೆ ಶ್ರೀಕೃಷ್ಣದೇವರಾಯ ತಿರುಪತಿಗೆ ಹೋಗುತ್ತಿದ್ದ. ವೇದನಾರಾಯಣನ ದರ್ಶನ ಮಾಡಿಕೊಂಡ. ಆಗ ರಾಯನಿಗೆ ತಾಯಿಯ ನೆನಪು ಬಂದಿತು. ತಾಯಿಯ ಹೆಸರಿನಲ್ಲಿ ಪುರ ಕಟ್ಟಲಿಕ್ಕೆ ಅಜ್ಞೆ ನೀಡಿಸಿದ. ವೇದನಾರಾಯಣ ನೆಲೆಗೊಂಡ ಕ್ಷೇತ್ರ, ಅರಿಕೊಂಡಾಪುರ ವಿಖ್ಯಾತವಾದ ಆ ಪ್ರದೇಶ ನಾಗಲಾಪುರವಾಯಿತು.

"ಅರಿಗಂಡಪುರಾಭಿಖ್ಯಂ
ಸರ್ವ ಸಸ್ಯ ಸಮನ್ವಿತಂ
ಶ್ರೀ ನಾಗಲಾಪುರಮಿತಿ
ಪ್ರತಿನಾಮ ಸಮನ್ವಿತಂ"

ಎಂದು ಒಂದು ಶಾಸನ ಹೇಳುತ್ತದೆ. ಈ ಕ್ಷೇತ್ರ ಪ್ರಸಿದ್ಧಿಗೆ ಮತ್ತೊಂದು ಮುಖ್ಯ ಕಾರಣ ಶಿಲ್ಪ ಚಾತುರ್ಯ.

ಪ್ರತಿ ವರುಷ ಮಾರ್ಚ್ ತಿಂಗಳು 25, 26, 27 ತಾರೀಖುಗಳಲ್ಲಿ ಸೂರ್ಯ ಕಿರಣಗಳು ವೇದನಾರಾಯಣನ ಮೂರ್ತಿ ಮೇಲೆ ಬಿದ್ದು ಕ್ರಮವಾಗಿ ಸ್ವಾಮಿ ಪಾದಗಳನ್ನು, ಹೊಕ್ಕುಳನ್ನು, ಮುಖಾರವಿಂದವನ್ನು ಸೇವಿಸುತ್ತವೆ. ಇಂತಹ ಚಿತ್ರ ಎಲ್ಲಿಯೂ ಇಲ್ಲ. ಸೂರ್ಯನಿಗೆ ಪ್ರಸಿದ್ಧ ದೇವಾಲಯಗಳು ಇರಬಹುದು. ಕಾಶ್ಮೀರದ ಮಾರ್ತಾಂಡ ದೇವಾಲಯ, ಪಶ್ಚಿಮ ತೀರದಲ್ಲಿ ಯೋಧೆರಾ ಎಂಬಲ್ಲಿರುವ ಸೂರ್ಯಾ

**ಡಾ॥ ಕೆ. ಸರ್ವೋತ್ತಮನ್**

ಲಯ, ಪೂರ್ವ ತೀರದಲ್ಲಿ ಕೋಣಾರ್ಕ ಮತ್ತು ದಕ್ಷಿಣದಲ್ಲಿ ನಾರಾಯಣನ್ ಕೋಯಿಲ್, ತಿರುಚಾನೂರ್‌ನಲ್ಲಿ ಪದ್ಮ ಸರೋವರ ಪ್ರಾಂಗಣದಲ್ಲಿರುವ ಸೂರ್ಯ ನಾರಾಯಣ ದೇವಸ್ಥಾನಗಳು ಪ್ರಸಿದ್ಧವಾದವು.

ಸೂರ್ಯ ಸೇವೆಗೆ ಕಾರಣಗಳೇನು? ಒಂದು, ಸೂರ್ಯ ಆದಿದೇವನಿಗೆ ಐದು ಪ್ರಾಕಾರಗಳು ಕಟ್ಟಿಸಿದನೆಂದು ಐತಿಹ್ಯ. ಮತ್ತೊಂದು ಶಿಲ್ಪಕಲಾ ರಹಸ್ಯ. ಈ ಮೂರು ದಿನದಲ್ಲಿಯೂ ನಾಗಲಾಪುರದಲ್ಲಿ ಪ್ಲವೋತ್ಸವ ನಡೆಯುತ್ತವೆ. ಮೊದಲನೆಯದಿನ ಸೀತಾಸಮೇತ ರಾಮಚಂದ್ರ ಮೂರ್ತಿ ಮತ್ತು ಎರಡು ದಿನಗಳು ವೇದವಲ್ಲೀ ಸಮೇತ ವೇದನಾರಾಯಣಸ್ವಾಮಿ ಅಲೆಗಳ ಮೇಲೆ ವಿಹಾರಮಾಡುತ್ತಾರೆ.

ವೇದನಾರಾಯಣ ದೇವಸ್ಥಾನ 12 ಎಕರೆ. ಆಲಯಕ್ಕೆ 7 ಗೋಪುರಗಳು. ಪ್ರಥಮ ದ್ವಾರದಲ್ಲಿ "ಮಣಿ ಸಂಧಿಕ" ದ್ವಾರಪಾಲಕರು ಇದ್ದಾರೆ. ಮಣಿ ಪುರುಷ ವಿಗ್ರಹ, ಸಂಧಿಕ ಸ್ತ್ರೀ ವಿಗ್ರಹ, ಇದೊಂದು ವಿಶೇಷ. ದ್ವಿತೀಯ ತೃತೀಯ ದ್ವಾರದಲ್ಲಿ ಜಯ ವಿಜಯರಿದ್ದಾರೆ. ಚತುರ್ಥ ದ್ವಾರದಲ್ಲಿ ಗಣಪತಿ, ದುರ್ಗಾ ದೇವಿ ವಿಗ್ರಹಗಳು ಪಾಲಕರಾಗಿ ಇದ್ದಾರೆ. ದುರ್ಗಾದೇವಿ ಕೈಯಲ್ಲಿ ಶಂಖ ಚಕ್ರಗಳು ಕಾಣುತ್ತದೆ. ಕೆಲವರು ಇದನ್ನೇ ನಾಗಲಾದೇವಿ (ಗ್ರಾಮ ದೇವತೆ) ಎಂದು ಹೇಳುತ್ತಾರೆ.

ವೇದಗಳನ್ನು ಉದ್ಧಾರಮಾಡಿದರಿಂದ ವೇದನಾರಾಯಣ. ಆ ಮೂರ್ತಿ ಪಶ್ಚಿಮಾಭಿಮುಖವಾಗಿ ಇದೆ. ಆದ್ದರಿಂದ ಮೀನ ಮಾಸ 12, 16, 14 ತಾರೀಖುಗಳಲ್ಲಿ ಸಾಯಂಕಾಲ ಕಿರಣಗಳು ಸ್ವಾಮಿ ವಿಗ್ರಹದ ಮೇಲೆ ಬೀಳುತ್ತವೆ. ಸ್ವಾಮಿಗೆ ನಿತ್ಯ ಪೂಜೆ ಇದ್ದರೂ ಅಭಿಷೇಕ ಮಾತ್ರ ವರುಷಕ್ಕೆ ಒಂದು ಸಲವೆ, ಅದೇ ತೈಲಾಭಿಷೇಕ. ಕಾರಣ ವೇದನಾರಾಯಣನು ಸುಧಾ ವಿಗ್ರಹ. ಆದರೆ ದೇವೇರಿಗಳಾದ ಶ್ರೀದೇವಿ ಭೂದೇವಿಯರಿಗೆ ಶುಕ್ರವಾರ ಅಭಿಷೇಕ ಉಂಟು. ಈ ಆಲಯ ಉತ್ಸವಗಳಲ್ಲಿ ಬ್ರಹ್ಮೋತ್ಸವ, ಕಂಚಿ ಗರುಡಸೇವೆ, ಆನಿವರ ಆಸ್ಥಾನ, ವರಲಕ್ಷ್ಮೀ ವ್ರತ, ಗೋಕುಲಾಷ್ಟಮಿ, ವಿನಾಯಕ ಚತುರ್ಥಿ, ನವರಾತ್ರಿ ಕೊಲುವು, ದುರ್ಗಾ ಪೂಜೆ, ದೀಪಾವಳಿ, ಕಾರ್ತೀಕ ದೀಪ, ಕಾರ್ತೀಕ ಏಕಾದಶಿ, ಧನುರ್ಮಾಸ, ರಥಸಪ್ತಮಿ, ತೈ ಶುಕ್ರವಾರ, ಮಾಸಿಮುಖ, ಪಂಗುಣಿ ಉತ್ಸವಂ — ಉತ್ಸವಗಳು ಪ್ರಸಿದ್ಧವಾದವು.

ನಾಗಲಾಪುರದಲ್ಲಿ ಲಭ್ಯವಾದ ವಿಗ್ರಹಗಳಲ್ಲಿ ತ್ರಿಮೂರ್ತಿ ವಿಗ್ರಹ, ತ್ರಿವಿಕ್ರಮ ವಿಗ್ರಹಗಳು ರಮಣೀಯವಾದವು. ಒಂದೇ ಶಿಲೆಯಲ್ಲಿ ಮಧ್ಯಭಾಗದಲ್ಲಿ ನಾರಾಯಣ ಎಡದಲ್ಲಿ ಪಾರ್ಶ್ವವಾಗಿ ಶಿವ, ಬಲದಲ್ಲಿ ಬ್ರಹ್ಮ ಕಾಣಿಸುತ್ತಾರೆ. ತ್ರಿವಿಕ್ರಮ ವಿಗ್ರಹ ಶಿಲಾಸೌಂದರ್ಯ ಸಮನ್ವಿತವಾದ ಮೂರ್ತಿ. ಈ ಎರಡು ವಿಗ್ರಹಗಳನ್ನು ಗೋವಿಂದರಾಜಸ್ವಾಮಿ ದೇವಸ್ಥಾನ ಸಮೀಪದಲ್ಲಿರುವ ನಮ್ಮಾಳ್ವಾರ್ ಗುಡಿಯಲ್ಲಿ ನೂತನವಾಗಿ ಸ್ಥಾಪಿಸಿದ ಮ್ಯೂಜಿಯಮ್‌ನಲ್ಲಿ ಭದ್ರಪಡಿಸಿದ್ದಾರೆ. ತಿರುಪತಿ ಯಾತ್ರೆ ಮಾಡುವವರು ತಪ್ಪದೆ ನೋಡಬೇಕಾದ ಸ್ಥಳಗಳಲ್ಲಿ ಇದು ಒಂದು.

ನಾಗಲಾಪುರದಲ್ಲಿ ಸಿಕ್ಕಿದ ಮತ್ತೊಂದು ವಿಗ್ರಹ ಆಂಡಾಳ್, ಶ್ರೀವಿಲ್ಲಿಪುತ್ತೂರ್‌ನಲ್ಲಿ ಇದ್ದ ವಿಗ್ರಹದಂತೆ ರಮಣೀಯವಾದ ವಿಗ್ರಹ ಇದು. ಮತ್ತು ವರಹಾವತಾರದ ವಿವಿಧ ಭಂಗಿಗಳೂ ಆಕುಳು ಕರುಗಳ ಚಿತ್ರಗಳು ಸಿಂಹದ ವಿವಿಧ ಆಕಾರಗಳು. ಮಹಾಬಲಿಪುರದಲ್ಲಿ ಇದ್ದಂತೆ ಮರ್ಕಟಗಳ ವಿನ್ಯಾಸಗಳನ್ನೂ ನೋಡಬಹುದು.

ನಾಗಲಾಪುರದಲ್ಲಿ ಸಂಸ್ಕೃತ, ತಮಿಳು, ತೆಲುಗು, ಕನ್ನಡ ಶಾಸನಗಳು ಕಾಣುತ್ತವೆ.

'ಶ್ರೀ ವೀರಕೃಷ್ಣರಾಯ ಮಹಾರಾಯರು ವಿರುಪಯಣ ... ಯಪ್ಪ ನಾಗಲಾದೇವಿಯ ಅರಮನೆಯಪುರ ದೇವಸ್ಥಾನಕ್ಕೆ ಊ ಅಷ್ಟಮಾಂಕದ ನೀರಕ್ಕೆ ಊ ತಮ್ಮ ರಾಯನ ಪ್ರಕಾರ ದತ್ತೆ ಹಾಕಿದ ಹಾಕಿದ ಶಾಸನ ಯೆಲ್ಲೆಕಟ್ಟು'-ಎಂದು ಉತ್ಸವಾದಿಗಳನ್ನು ಲೋಪರಹಿತವಾಗಿ ಮಾಡಬೇಕೆಂದು ಈ ಶಾಸನ ಹೇಳುತ್ತದೆ.

---

# ಆರ್ಜಿತ ಅಭಿಷೇಕ

# ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

## ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಆರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/-ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ, ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.



# ಗೃಹಲಕ್ಷ್ಮೀ



## ಲಕ್ಷ್ಮೀಶಕವಿ ಚಿತ್ರಿಸಿದ
# ಸೀತಾಪರಿತ್ಯಾಗ

ಲಕ್ಷ್ಮೀಶನ ಜೈಮಿನಿಭಾರತ ಯುಧಿಷ್ಠಿರನ ಅಶ್ವಮೇಧಯಾಗದ ಕಥೆ. ಈ ಕೃತಿಯಲ್ಲಿ ರಾಮಾಯಣದ ಕಥೆ ಬರುವ ಸಂದರ್ಭ ಇದು – ಧರ್ಮರಾಯನ ಅಶ್ವಮೇಧದ ಕುದುರೆ ಬಭ್ರುವಾಹನನ ರಾಜಧಾನಿಯಾದ ಮಣಿಪುರಕ್ಕೆ ಬಂತು. ಬಭ್ರುವಾಹನ ಆ ಕುದುರೆಯನ್ನು ಕಟ್ಟಿ ಯುದ್ಧಸಿದ್ಧತೆಗೆ ತೊಡಗಿದ. ತಾಯಿ ಚಿತ್ರಾಂಗದೆಯಿಂದ, ಅಶ್ವಮೇಧದ ಕುದುರೆಯ ಬೆಂಗಾವಲಿಗೆ ಬಂದಿರುವ ಅರ್ಜುನ ತನ್ನ ತಂದೆಯೆಂದು ತಿಳಿಯಿತು. ಆದ್ದರಿಂದ ಯುದ್ಧಕ್ಕೆ ಹೋಗುವ ಬದಲು, ತಂದೆಯನ್ನು ಸಂಭ್ರಮದಿಂದ ಸ್ವಾಗತಿಸಲು ಮಂತ್ರಿಗಳೊಂದಿಗೆ "ಸಕಲ ವಸ್ತು ಸಹಿತ ಚತುರಂಗದೊಡನೆ, ಗುಡಿತೋರಣಾವಳಿಯ ಸಿಂಗರದ ಪದಪಿ" ನಿಂದ ಬರುತ್ತಾನೆ. ಹರ್ಷದಿಂದ, ತಂದೆಗೆ ಸಕಲವನ್ನೂ ಅರ್ಪಿಸಿ, ಭಯ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡುತ್ತಾನೆ. ಅರ್ಜುನನು ಅವನ ತಾಯಿಯನ್ನು ಬಾಯಿಗೆ ಬಂದಂತೆ ಬೈದು, 'ನೀನು ನನ್ನ ಮಗನೇ ಅಲ್ಲ, ಯುದ್ಧಕ್ಕೆ ಹೆದರಿದ ಹೇಡಿ, ಕ್ಷತ್ರಿಯ ಧರ್ಮವನ್ನು ಬಿಟ್ಟು, ವೈಶ್ಯ ಯುಕ್ತಿಯಿಂದ ಯುದ್ಧ ಮಾಡದೆ ತಪ್ಪಿಸಿ ಕೊಳ್ಳುತ್ತಿರುವೆ' – ಮುಂತಾದ ಕಟೂಕ್ತಿಗಳಿಂದ ನಿಂದಿಸುತ್ತಾನೆ. ಬಭ್ರುವಾಹನನಂತಹ ಕ್ಷತ್ರಿಯನಿಗೆ ಈ ಮಾತುಗಳು 'ಕಿವಿಯಲ್ಲಿ ಕಾದಸೀಸವನ್ನು ಹೊಯ್ದಂತೆ' ಮಾಡುತ್ತವೆ. ತಂದೆಗೆ ತಿರುಗಿಬಿದ್ದು ಯುದ್ಧಕ್ಕೆ ಅಣಿಯಾಗುತ್ತಾನೆ. ತಂದೆ ಮಕ್ಕಳಿಗೆ ಭೀಕರ ಯುದ್ಧವಾಗುತ್ತದೆ. ಈ ಯುದ್ಧ ಜೈಮಿನಿಗೆ ರಾಮ–ಲವಕುಶರ ಯುದ್ಧವನ್ನು ನೆನಪಿಗೆ ತರುತ್ತದೆ. ಜನಮೇಜಯನ ಕೋರಿಕೆಯಂತೆ, ರಾಮ–ಲವಕುಶರ ಯುದ್ಧವನ್ನು, ಜೈಮಿನಿ ವರ್ಣಿಸುತ್ತಾನೆ. ಜೈಮಿನಿಗಿರಲಿ, ಲಕ್ಷ್ಮೀಶನಿಗೆ ಈ ಸಂದರ್ಭ ಒದಗಿದ್ದೇ ಸಾಕೆಂಬಂತೆ ನಿರಾತಂಕವಾಗಿ ರಾಮಾಯಣದ ಕಥೆಯನ್ನು ವರ್ಣಿಸುತ್ತಾನೆ. ನಾಲ್ಕು ಸಂಧಿಗಳಲ್ಲಿ ಈ ರಾಮಾಯಣದ ಕಥೆಯನ್ನು ತಿಳಿಸುತ್ತಾನೆ. ಈ ನಾಲ್ಕು ಸಂಧಿಗಳಲ್ಲಿ ಎರಡು ಸಂಧಿಗಳು ಸೀತಾಪರಿತ್ಯಾಗ ವರ್ಣನೆಗೇ ಮೀಸಲಾಗಿವೆ. ಕಾವ್ಯವಸ್ತುವಿಗೆ ಈ ರಾಮಾಯಣದ ಕಥೆ ಸ್ವಲ್ಪ ಹೊರೆ ಎನಿಸಿದರೂ, ಪ್ರತ್ಯೇಕವಾಗಿ ನೋಡಿದಾಗ ಈ ಭಾಗವೇ ಒಂದು ಸುಂದರ ಕಾವ್ಯ ಖಂಡದಂತಿದೆ. ಪಾತ್ರಗಳ ಭಾವ ಭಾವನೆಗಳ ಹೃದಯ ಸ್ಪರ್ಶಿ ಚಿತ್ರಣದಿಂದಾಗಿ ಸೀತಾಪರಿತ್ಯಾಗ ಪ್ರಸಂಗ ಅತ್ಯಂತ ಸೊಗಸಾಗಿ ಚಿತ್ರಿತವಾಗಿದೆ.

ರಾವಣನನ್ನು ಸಂಹರಿಸಿದ ಶ್ರೀರಾಮನು, ಸೀತೆಯೊಂದಿಗೆ ಮರಳಿ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾಗುತ್ತಾನೆ. ದಕ್ಷತೆಯಿಂದ ರಾಜ್ಯ ಪರಿಪಾಲನೆ ಮಾಡುತ್ತ ಸುಖವಾಗಿ ಕಾಲಕಳೆಯುತ್ತಿರುತ್ತಾನೆ. ಹೀಗೆಯೇ ಇರುವಾಗ ರಾಮಸೀತೆಯರ ಪುತ್ರಾಕಾಂಕ್ಷೆಯ ಫಲವಾಗಿ ಸೀತೆ ಗರ್ಭಿಣಿಯಾಗುತ್ತಾಳೆ. ಸೀಮಂತೋತ್ಸವವೂ ವೈಭವದಿಂದ ಜರಗುತ್ತದೆ. ಒಂದುದಿನ, ಏನು ತೋಚಿತೋ, ಸೀತೆ ರಾಮನನ್ನು ಕರೆದು, 'ಪ್ರಿಯನೇ, ನನಗೆ ಪರಿಶುದ್ಧವಾದ ತಪೋವನದ ಪರ್ಣಶಾಲೆಯಲ್ಲಿರುವ ಋಷಿಪತ್ನಿಯರ ಸಹವಾಸದಲ್ಲಿ ಕೆಲವು ದಿನಗಳಿದ್ದು ರಾಜಧಾನಿಯ ಬೇಸರ ಪರಿಹಾರ ಮಾಡಿಕೊಂಡು ಬರಬೇಕೆಂದು ಬಯಕೆಯಾಗಿದೆ. ಆದ್ದರಿಂದ ನನ್ನನ್ನು ಮತ್ತೊಮ್ಮೆ ಅರಣ್ಯಕ್ಕೆ ಕಳಿಸು'– ಎಂದು ಕೇಳಿಕೊಳ್ಳುತ್ತಾಳೆ. ಅವಳ ಬಯಕೆಯನ್ನು ಕೇಳಿ ರಾಮ ನಗುತ ಆಕ್ಷೇಪದಿಂದ ಕಳುಹುವೆನಾಗಿ ಸಂತೈಸಿದ. ಹದಿನಾಲ್ಕು ವರ್ಷಕಾಡಿನಲ್ಲಿದ್ದೂ ಸೀತೆಗೆ ಕಾಡಿನ ಆಸೆ ಹೋಗಲಿಲ್ಲವೆ ಎಂಬ ತಿಳಿವ್ಯಂಗ್ಯ ರಾಮನ ರಾಮನ ನಗುವಿನಲ್ಲಿದೆಯೆನಿಸುತ್ತದೆ. "ಆಕ್ಷೇಪ" ವೆಂಬ ಮಾತೂ ಅರ್ಥಪೂರ್ಣ. ಈ ಪದ ಮುಂದೆ ರಾಮ ಸೀತೆಯನ್ನು ಆಕ್ಷೇಪಿಸಿಯೇ ಕಳುಹಿಸುವುದನ್ನು ಸೂಚಿಸುತ್ತದೆ. ಈ ಮಧ್ಯೆ ರಾಮನಿಗೆ ಒಂದು ರಾತ್ರಿ ಸೀತೆ ಗಂಗಾನದಿಯನ್ನು ದಾಟಿ, ಅರಣ್ಯಹೊಕ್ಕು, ದೀನಳಾಗಿ ದಿಕ್ಕಿಲ್ಲದವರಂತೆ ತೊಳಲುತ್ತ, ದೆಸೆ ದೆಸೆಯನ್ನು ನೋಡಿ ದುಃಖಿಸುತ್ತಿರುವಂತೆ ಕನಸು ಬೇರೆ ಬಿತ್ತು. ಪಾಪ! ಮುಂದೆ ಸೀತೆಗೊದಗಲಿರುವುದು ಇದೇ ಸ್ಥಿತಿ ಎಂದು ತಿಳಿದಿರದ ರಾಮ ಆತಂಕಗೊಂಡ ಮನದಿಂದ, ವಸಿಷ್ಠರನ್ನು ಕನಸಿನ ಫಲಕೇಳಿದ. ಕನಸು ಅಶುಭವೆಂದು ಹೇಳಿ, ಶಾಂತಿ ಮಾಡಿಯಾಯಿತು. ಇಷ್ಟಾದರೂ ರಾಮನ ಮನವನ್ನು



ಮುಂದೊದಗುವ ವಿಪತ್ತನ್ನು ಮೊದಲೇ ಸೂಚಿಸುವಂತಹ ಯಾವುದೋ ಒಂದು ಅವ್ಯಕ್ತ ಸಂಕಟ ಪೀಡಿಸುತ್ತಿತ್ತು. ಈ ಸಂಕಟದಲ್ಲಿರುವಾಗಲೇ ಪ್ರಜೆಯೊಬ್ಬನಿಂದ ರಾಮ ಅಪವಾದದ ಮಾತನ್ನೂ ಕೇಳಬೇಕಾಯಿತು. "ಅಗಲಿರ್ದ ಮಡದಿಯಂ ಮತ್ತೆ ರಘುರಾಜನಂತೆ ಕೊಂಡಾಳುವವ ತಾನಲ್ಲ" ಎಂದು ಹೇಳಿದ, ರಜಕನೊಬ್ಬನ ಮಾತೇ ಮುಂದೊದಗಿದ ಎಲ್ಲ ಅನರ್ಥಗಳಿಗೂ ಬೀಜವಾಯಿತು. ರಾಮ, ಸೀತೆಯ ಶೀಲದ ಬಗ್ಗೆ ಪ್ರಜೆಯೊಬ್ಬನಿಗಿದ್ದ ಇಂತಹ ಸಂಶಯವನ್ನು ಕಂಡು ತತ್ತರಿಸಿ ಹೋದ. ಅವನ ಚಿತ್ರವನ್ನು ಕವಿ ಹೀಗೆ ವರ್ಣಿಸುತ್ತಾನೆ. "ಬಂಧನಕ್ಕೊಳಗಾದ ಮತ್ತಗಜದಂದದಿಂ ನಿಜ ಶಿರವ ನೊಲೆದು, ಮೌನದಿಂದೆ ನಿಂದು, ಮೂಗಿನ ಮೇಲೆ ಬೆರಳಿಟ್ಟು, ಸ್ವೈರಗಾಗಿ ನೆನೆ ನೆನೆದು ಚಿತ್ತದೊಳ್ ನೊಂದು ಬಿಸುಸುಯ್ದು ಕಡುವಳಿದು ಕಾತರಿಸಿ ಕಳೆಗುಂದಿ ದುಮ್ಮಾನದಿಂ ಪೊಕ್ಕನ್ ಅಂತಃಪುರಕೆ ಪುತ್ತವುಗುವ ಅಹಿಪನಂತೆ".

ಅರಮನೆಗೆ ಬಂದವನೇ, ರಾಮ ತನಗಾಗಿ ಕಾಯುತ್ತಿದ್ದ ಯಾವ ರಾಜರನ್ನೂ ಲಕ್ಷಿಸಲಿಲ್ಲ. ಚಿಂತಾಜಡವಾದ ಅಂಗಗಳಿಂದ ಬಾಧೆಪಡುತ್ತ,

**ಶ್ರೀಮತಿ ಎನ್. ಪುಷ್ಪ**

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

  ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಬಳಲಿದವನಾಗಿ ಒಂದೆಡೆ ಮಲಗಿದ. ಈ ವಿಷಯ ತಿಳಿದದ್ದೇ ರಾಮನ ಸಹೋದರರೆಲ್ಲ ಗಾಬರಿಯಿಂದ ಓಡಿಬಂದರು, ಯಾರನ್ನೂ ಆದರಿಸಿದ ರಾಮ ಅನುಜರನ್ನು ಪ್ರೀತಿಯಿಂದ ಸಮೀಪ ಕರೆದು ಕೂರಿಸಿಕೊಂಡ. ಅವರ ಮುಂದೆ ತನ್ನ ಒಡಲಾಳವನ್ನು ತೋಡಿಕೊಂಡ. "ನೆರವಿಗಳೊಳು ಕದ್ದ ಕಳ್ಳನವೊಲಾಡಿಸಿ ಕೊಳ್ಳಲಾರೆನ್, ಒಡಲಿದ್ದಲ್ಲಿ ನಿಂದೆಗೊಳಗಾಗಿ ಬದುಕುವವನಲ್ಲ. ತಿದ್ದಿತೀರದ ವಿಲಗಕಂಜುವೆಂ". ಸೀತೆಯನ್ನು ಪರಿತ್ಯಜಿಸುವುದೊಂದೇ ಇದಕ್ಕೆ ಪರಿಹಾರವೆಂಬ ತನ್ನ ನಿರ್ಧಾರವನ್ನು ತಿಳಿಸಿದ. ರಾಮನ ಮನದ ತೊಳಲಾಟ ಎಂದರೆ ಸೀತೆ ಅಯೋನಿಜೆ, ರೂಪಗುಣ ಶೀಲ ಸಂಪನ್ನೆ, ಭುವನಪಾವನೆ, ಪುಣ್ಯಚರಿತೆ, ಮಂಗಳ ಮಹೋತ್ಸವೆ, ಪತಿವ್ರತೆ ಎಂದು ಖಚಿತವಾಗಿ ಗೊತ್ತು. ಆದರೆ ಇಂತಹವಳು ತನ್ನ ಪತ್ನಿಯೆಂದು ತಿಳಿದಿದ್ದರೂ, ತನಗೊದಗಿದ ಜನಾಪವಾದ. ಇಕ್ಷಾಕು ವಂಶದ ಪೃಥು, ಪುರೂರವ, ಹರಿಶ್ಚಂದ್ರ, ದಶರಥರಂತೆಯೇ ತಾನು ಅಪಖ್ಯಾತಿಯಿಲ್ಲದೆ ಆಳಬೇಕೆಂಬ ಹಂಬಲ. ಈ ದ್ವಂದ್ವದಲ್ಲಿ ರಾಮನಿಗೆ ಸೀತೆ ಗೌಣವಾಗುತ್ತಾಳೆ. ಆದ್ದರಿಂದಲೇ ಅತಿ ಕಠಿಣ ಹೃದಯಿಯಾಗಿ, ತುಂಬುಗರ್ಭಿಣಿಯಾದ ಸೀತೆಯನ್ನು, ಅವಳಿಗೆ ಹೇಳದೆಯೇ, ಏಕಾಂಗಿಯಾಗಿ ಕಾಡಿನಲ್ಲಿ ಬಿಡುವುದಕ್ಕೂ ಹಿಂಜರಿಯುವುದಿಲ್ಲ. ಪ್ರಜಾಪಾಲಕನಾದ ರಾಮನಿಗೆ ರಜಕನೊಬ್ಬನ ಮಾತು ಬೆಲೆಗೆ ಅರ್ಹವಾಗುತ್ತದೆ. ಸೀತೆ ಹೆಂಡತಿಯಿರಲಿ, ಅವಳೂ ಒಬ್ಬಳು ಪ್ರಜೆಯೆಂಬುದೂ ಮರೆತು ಹೋಗುತ್ತದೆ. ತನ್ನ ಯಶಸ್ಸೇ ಮುಖ್ಯವಾಗುತ್ತದೆ.

ಸೀತೆಯನ್ನು ತ್ಯಜಿಸುವುದಾಗಿ ಹೇಳಿದಾಗ ರಾಮನ ಸಹೋದರರು ತೋರಿದ ಪ್ರತಿಕ್ರಿಯೆ ಮನ ಕಲಕುವಂತಹುದು. ಭರತನ ವ್ಯಕ್ತಿತ್ವ ರಾಮಾಯಣ ಓದಿದವರಿಗೆಲ್ಲ ಗೊತ್ತು, ರಾಮನ ನಿರ್ಧಾರವನ್ನು ಕೇಳಿದೊಡನೆ ಭರತ ಗಡಗಡನಡುಗಿದನಂತೆ, ದುಃಖದಿಂದ ಸ್ವರಗದ್ಗದಿತವಾಯ್ತು. ಕಣ್ಣುಗಳಲ್ಲಿ ನೀರು ಪ್ರವಾಹದೋಪಾದಿಯಲ್ಲಿ ಉಕ್ಕಲಾರಂಭಿಸಿತು. ಹೇಳಿದ – ಅಣ್ಣ, ರವಿಕುಲರಾಯರು ಏನ್ನುತ್ತಾರೆ ಎಂಬುದು ಬೇಡ, ಸೀತೆಯ ಚಾರಿತ್ರ್ಯದ ಅಗ್ನಿ ಪರೀಕ್ಷೆಯಾಗಿದ್ದರೂ, ರಜಕನೊಬ್ಬನ ಮಾತನ್ನು ಕೇಳಿ, ವಂಶಪಾವನೆಯಾದ ಸೀತೆಯನ್ನು, ಹಿರಿದು ಕಿರಿದರ ಪರಿವೆಯಿಲ್ಲದ ಮೂಢನಂತೆ "ಕರೆವ ಕಪಿಲೆಯ ನಯಪಿದರ್ ಪೊಡೆದಡವಿಗಟ್ಟುವಂತೆ ಪರಿತ್ಯಾಗ ಮಾಡಬಹುದೇ." ಮುಂದಿನದು ಲಕ್ಷ್ಮಣನ ಸರದಿ – "ಕಾಯಸುಖಕೋಸುಗಂ ಕೃತಧರ್ಮಮಂ ಬಿಡುವೊಲಾಯತಾಕ್ಷಿಯ ಭಾವಶುದ್ಧಿಯಂ ತಿಳಿದಿರ್ದು ವಾಯದಪವಾದಕಿಂತು ಸೀತೆಯಂ ತೊರೆಯಬೇಕೆಂಬರೆ ಕರುಣೆಯಿಲ್ಲದೆ"? ಎಂದು ಪ್ರಶ್ನಿಸಿದ. ಸೀತೆ "ತುಂಬಿದ ಬಸಿರ್ ಬೆಸಲಾದ ದೇವಿ" ಎಂಬುದನ್ನು ಮತ್ತೊಮ್ಮೆ ನೆನಪಿಸಿದ. ಅವಳನ್ನು "ಪ್ರಿಯದಿಂದಾರೈದು ಸಲಹಬೇಕು. ಅಲ್ಲದೆ ದೂರೀಕರಿಸುವರೆ" ಎಂದು ಕೇಳಿದ. ಶತ್ರುಘ್ನನಂತೂ ರಾಮನ ತೀರ್ಪನ್ನು ಕೇಳಿ, "ಬಿಡುವರೆ ಇಂತಿಕ್ಷ್ವಾಕುವಂಶದವರ್ ಅರಸಿಯಂ? ನುಡಿವರೆ ಇಂತಿಳಿಯೊಳಾರಾದೊಡಂ ದೂಸರಂ, ಪಡೆವರೆಂತ ಮಲ ಸತ್ಕೀರ್ತಿಯಂ, ಬದ್ದಿವೇಳ್ವುದಕೊರ್ವರಿಲ್ಲವಾಗಿ ಕಡಿವರೆಂತೇಳ್ಗೆಯಂ, ಪೆಣ್ಣಳಲ್ವೆಂಕಿಯಿಂ ಸುಡುವರೆಂತನ್ವಯದ ಬಾಳ್ಕೆಯನ್ ಇದಕ್ಕೆ ಕಿವಿಗೊಡುವರೆಂತೀಗಳೆನ್ನೊಡವುಟ್ಟಿದವರ್ ಎನುತ" ಉರಿದೆದ್ದನು.

ಇಷ್ಟೆಲ್ಲ ಬುದ್ಧಿ ಹೇಳಿದ ಸೋದರರ ಮಾತುಗಳೂ ರಾಮನ ಪಾಲಿಗೆ 'ಸಮುದ್ರದಲ್ಲಿ ಕೇದ ಇಂಗಿ'ಗೆ ಸಮವಾಯಿತು. ತನ್ನ ನಿರ್ಣಯಕ್ಕೆ ತಮ್ಮಂದಿರಾರೂ ಒಪ್ಪಿಗೆ ಸೂಚಿಸಲಿಲ್ಲವೆಂದು "ಸಾಕು ನಿಮಗೊರೆದೊಡೇನಹುದು" ಎಂದು ಬೇಸರದಿಂದ ಭರತ ಶತ್ರುಘ್ನರನ್ನು ಮನೆಗೆ ಕಳುಹಿಸಿದ. "ಕಲಿಯುಗದೆ ವಿಪ್ರರಾಚಾರಮಂ ಬಿಡುವಂತೆ ಸೀತೆಯನ್ನು ತ್ಯಜಿಸುತ್ತೇನೆ ರವಿಕುಲದ ಪಕೀರ್ತಿಯಂತಾಳಪರೆ" ಎಂಬ ತನ್ನವಾದವನ್ನೆತ್ತಿಹಿಡಿದ, ಲಕ್ಷ್ಮಣನೊಬ್ಬನನ್ನು ಸಮೀಪಕ್ಕೆ ಕರೆದು "ತಮ್ಮ ಬಾ ನೀನಿಂದುವರೆಗೆ ನಾನೆಂದ ಮಾತಮೀರಿದವನಲ್ಲ, ಕೆಲಬಲನನಾರಯ್ಯುತ ಮರುಗದಿರು, ಎನ್ನ ಕೊರಳಿಗಿದೆ ಖಡ್ಗಮ್, ಅಲ್ಲದೊಡೀಗ ಜಾನಕಿಯನು ಉಮ್ಮಳಿಸದೊಯ್ದು ಗಂಗೆಯ ತಡಿಯರಣ್ಯದೊಳ್, ಸುಮ್ಮನೆ ಕಳುಪಿಬರ್ಪುದು, ಅವಳೆನ್ನೊಳಾಡಿರ್ಪಳೊಮ್ಮೆ ಕಾನನ ಕೈದಬೇಕೆಂಬ ಬಯಕೆಯ ಅದೆ ನೆವಂ ನಿನಗೆ" ಎಂದು ಹೇಳಿದ ರಾಮ ಒಪ್ಪಿಸಿದ ಕಾರ್ಯ ಲಕ್ಷಣನನ್ನು ಉಭಯ ಸಂಕಟಕ್ಕೀಡು ಮಾಡಿತು. "ರಾಘವೇಂದ್ರ, ನಿನ್ನಾಜ್ಞೆಯಂ ಮೀರಲ್ಕೆ ನನಗೆ ರೌರವಮಪ್ಪುದು; ಎಂದುದಂ ಮಾಡಲ್ಕೆ ಜನನಿಯಂ ಕೊಂದ ಉಗ್ರಗತಿಯಪ್ಪುದು, ಏಗೆಯ್ವೆನ್" ಎನ್ನುತ್ತ ಕಡುಶೋಕದಿಂದ, ಧಾರಾಪೂರ್ವಕವಾಗಿ ಹರಿಯುತ್ತಿರುವ ಕಂಬನಿಯಿಂದ ನೆನೆದು ದುಃಖಪ್ರವಾಹದಲ್ಲಿ ಮುಳುಗಿ ಹೋದ. ಇದರಿಂದ ರಾಮನೇನೂ ವಿಚಲಿತನಾಗಲಿಲ್ಲ ದಯಾಹೀನನಾಗಿ, ತನ್ನ ಕಾರ್ಯವಾದರೆ ಸಾಕೆಂಬಂತೆ ಒರಟು ಮಾತಿನಿಂದ ತಡಮಾಡದೆ ಸೀತೆಯನ್ನು ಬಿಟ್ಟು ಬಾ ಹೋಗು ಎಂದು ಗರ್ಜಿಸುತ್ತ ಆಜ್ಞೆ ಮಾಡಿದ.

ಲಕ್ಷ್ಮಣ, ರಾಮನನ್ನು ಪ್ರತಿಭಟಿಸಲಾರದ ಸ್ಥಿತಿಗೆ ಬಂದು, ದುಃಖದಿಂದ ಕೃಶನಾದವನಾಗಿ ರಥವನ್ನು ಸಿದ್ಧಪಡಿಸಿ, ಸೀತೆಯ ಅರಮನೆಯ ಬಳಿಬಂದ ಸೀತೆಯನ್ನು ಕಣ್ಣೊಳೀಕ್ಷಿಸದೆ, ತಲೆವಾಗಿ ದೂರದೊಳೆ ನಿಂದು ಕೇಳಿದ, "ತಾಯೆ, ನೀನೇತಕೆಳೆಸಿದ, ನಿನ್ನನೀಗ ರಘುರಾಯಂ ತಪೋವನಕೆ ಕಳುಹಿ ಬರಹೇಳಿದಂ ಪ್ರಿಯಮುಳ್ಳೊಡೆ ರಥಂ ಪಣ್ಣಿ ಬಂದಿಹೆಂ ಕೋಬಿಜಯಂಗೆಯ್ವುದು" ಎಂದು ಸೂಕ್ಷ್ಮವಾಗಿ ರಾಮನ ಅಭಿಪ್ರಾಯವನ್ನು ತಿಳಿಸಿದ. ರಾಮನಲ್ಲಿ ದೋಷವನ್ನೇ ಎಣಿಸಿದ ಸೀತೆಗೆ ಲಕ್ಷ್ಮಣನ ಮಾತಿನ ಸೂಕ್ಷ್ಮದ ಅರ್ಥ ಹೇಗೆ ತಾನೆ ಆಗಲು ಸಾಧ್ಯ? ಇಷ್ಟು ಬೇಗ 'ತನ್ನ ಭೀಷ್ಟಮಂ ಸಲಿಸುವಂ ಕಾಂತನೆಂಬ ಉತ್ಸವ ಸಂಭ್ರಮಾನ್ವಿತೆ' ಯಾದಳು. ಮುಂದೊದಗಲಿರುವ ದುಃಸ್ಥಿತಿಯ ಕಲ್ಪನೆಯೂ ಇಲ್ಲದ ಆಕೆ ಹೊರಡುವ ಹೊತ್ತನ್ನು ನಿಶ್ಚಯಿಸಿ "ನಂಬಿದರ ಭೀಷ್ಟಮಂ ಸಲಿಸುವ ಕೃಪಾಳು ತಾನೆಂಬುದಂ ಕಾಣಿಸಿದನಿಂದೆನ್ನ ಕಾಂತನ್" ಎಂದು ರಾಮನನ್ನು ಪ್ರಶಂಸಿಸುತ್ತ ಕೌಸಲ್ಯೆ, ಸುಮಿತ್ರೆ, ಕೈಕೆಯರಿಗೆ ನಮಸ್ಕರಿಸಿ, ಅವರಿಂದ ಆಶೀರ್ವಾದ ಪಡೆದಳು. ಆಶ್ರಮವಾಸಿಗಳಿಗೆ ಅಮೂಲ್ಯವಾದ ಉಡುಗೊರೆಗಳನ್ನು ಸಿದ್ಧಪಡಿಸಿ ಕೊಂಡಳು. ನೆಚ್ಚಿನ ಪತಿದೈವವಾದ ಶ್ರೀರಾಮಚಂದ್ರನ ಪಾದುಕೆಗಳನ್ನು ತರಿಸಿ, ಬಳಿಯಿರಿಸಿಕೊಂಡಳು. ತನಗೊದಗಿರುವ ಹರ್ಷ ಶಾಶ್ವತವೆಂದು ಭಾವಿಸಿ "ಉಗುಮಿಗೆಯ ಹರ್ಷದೊಳಂಗನೆ ಮಣಿವರೂಥಮಂ ನಿಜಮಿದೆಂದು ನೆಗಹಿದಳು"–ಈ ಮಾತು ಹೃದಯಸ್ಪರ್ಶಿ.

ಪ್ರಯಾಣ ಸಂಭ್ರಮದಿಂದ ಉಬ್ಬಿ ಹೋಗಿರುವ ಸೀತೆಯನ್ನೂ, ದಟ್ಟ ಅರಣ್ಯದ ನಡುವೆ ಆಕೆಯನ್ನು ಬಿಟ್ಟು ಅವಳ ಹರ್ಷವನ್ನು ಛಿದ್ರಗೊಳಿಸಲಿರುವ ತನ್ನ ಪಾಪಕಾರ್ಯವನ್ನೂ ನೆನೆಸಿಕೊಂಡೇ ಲಕ್ಷ್ಮಣನ ಮನಸ್ಸು ಛಿದ್ರ ಛಿದ್ರವಾಯಿತು. ಉಕ್ಕಿ ಬರುತ್ತಿರುವ ಕಂಬನಿಯನ್ನು ತಡೆಹಿಡಿದು ರಥ ನಡೆಸಲು ಅನುವಾದ. "ಧುರದೊಳಾಂತರನಿರಿದು ಮೆರೆಯಲೇರುವ ರಥಂ ತರಳೆಯಂ ಕಾನನಕೆ ಕಳುಹಲಡರ್ದಂತಾಯ್ತು! ಧರೆಯೊಳಾರ್ತರನೆಯ್ದಿ ರಕ್ಷಿಸುವ ಬುದ್ಧಿ ಕೋಮಲೆಯ ಕೊಲೆಗೆಲಸಕಾಯ್ತು" ಎಂದು ಬಾರಿಬಾರಿಗೂ ಮನದಲ್ಲಿ ಕುದಿಯುತ್ತ ಲಕ್ಷ್ಮಣ ಮುಂದುವರಿದ. ಇವನ ಚಿತ್ತವನ್ನು ಮತ್ತಷ್ಟು ಸುಡಲು, ಸೀತೆಯು ಮುಂದಾಡುವ ಮಾತುಗಳು ಪೋಷಕವಾಗುತ್ತವೆ. "ಲಕ್ಷ್ಮಣನೇ ಕಾಡಿನ ಈ ಮಾರ್ಗವೇಕೆ ಇಷ್ಟು ದುಸ್ತರವಾಗಿದೆ? ನರಿಗಳೇಕೆ ಕೂಗುತ್ತಿವೆ? ನನ್ನ ಬಲಗಣ್ಣೇಕೆ ಅದುರುತ್ತಿದೆ? ಈ ಅಪಶಕುನಗಳಿಂದ ನನ್ನ ಹೃದಯ ಹೆದರಿಕೆಯಿಂದ ಮುದುಡುತ್ತಿದೆ. ಏನುಮಾಡಲಿ? ಸದ್ಯ, ರಾಮನಾಯುಷ್ಯಕೈಶ್ವರ್ಯಕೆ, ಉಳ್ಳ ಭುಜಬಲಕೆ ಒಳ್ಳಿತಾಗಲಿ" ಎನ್ನುತ್ತಾಳೆ. ಈ ಸಂದರ್ಭದಲ್ಲೂ ಸ್ವಾರ್ಥ ತ್ಯಜಿಸಿ ರಾಮನ ಬಗ್ಗೆ ಯೋಚಿಸುವ ಸೀತೆಯ ಬಗ್ಗೆ ಅನುಕಂಪ ಮೂಡುತ್ತದೆ.

ಲಕ್ಷ್ಮಣನ ರಥ ವಾಯುವೇಗದಲ್ಲಿ ಗಂಗಾನದಿಯ ಬಳಿಗೆ ಬಂದಿತು. ಸೀತೆಯನ್ನು ರಥದಿಂದ ಇಳಿಸಿ ಅಂಬಿಗರ ದೋಣಿಯೊಂದರಲ್ಲಿ ಗಂಗೆಯನ್ನು ದಾಟಿದ ಲಕ್ಷ್ಮಣ. ನಾನಾವಿಧದ ಕ್ರೂರ ಮೃಗಪಕ್ಷಿಗಳಿಂದ ಕೂಡಿದ ಭಯಂಕರಾರಣ್ಯವನ್ನು ಪ್ರವೇಶಿಸಿದ. ಆ ಅರಣ್ಯವನ್ನು ಕಂಡು ಸೀತೆ, ಭಯದಿಂದ ನಡುಗಿ, ದುಃಖದಿಂದ, ರಕ್ಷಕ ಮಂತ್ರವಾದ "ರಾಮನಾಮಂಗಳಂ ಜಪಿಸುತ" ಲಕ್ಷ್ಮಣನನ್ನು ಕುರಿತು – ಸೌಮಿತ್ರಿ, ಈ ಮಹಾರಣ್ಯ ಸಂಚಾರಕ್ಕೆ ಅಸದಳವಾಗಿ ತೋರುತ್ತದೆ. ಎಲ್ಲೂ ಆಶ್ರಮವಾಸಿಗಳಾಗಲೀ, ಋಷಿಪತ್ನಿಯರಾಗಲಿ, ಯಾಗಶಾಲೆಯ ಧೂಮವಾಗಲಿ ಕಾಣದಲ್ಲಾ? ಎಲ್ಲ ಬಿಟ್ಟು "ದಾರುಣದ ಕಟ್ಟಡವಿಗೇಕೈತಂದೆ ತಂದೆ?" ಎಂದು ಕೇಳುತ್ತಾಳೆ. 'ತಂದೆ' ಎಂಬ ಇಲ್ಲಿನ ಸಂಬೋಧನೆ ಮೃದುವಾಗಿ ಕಂಡರೂ, ಲಕ್ಷ್ಮಣನನ್ನು ನೇರವಾಗಿ ಕೊಲ್ಲುತ್ತದೆ.

ಸೀತೆಯ ಪ್ರಶ್ನೆಗೆ ಲಕ್ಷ್ಮಣ ಈಗಂತೂ ಪ್ರತ್ಯುತ್ತರನೀಡುವ ಸ್ಥಿತಿಯಲಿಲ್ಲ. ಅವನಿಗೆ ಇಬ್ಬಗೆಯ ಸಂಕಟ, ಅಸಹಾಯಕತೆ. ರಾಮನ ಮಾತನ್ನು ಸೀತೆಗೆ ಹೇಳುವುದೆ, ಬಿಡುವುದೆ? ಕ್ರೌರ್ಯದಿಂದ ಕಾಡಿನಲ್ಲಿ ಬಿಟ್ಟು ಹೊರಡುವುದೆ? ಹಿಂತಿರುಗಿ ಹೋಗದೆ ಸೀತೆಯ ರಕ್ಷಣೆಯಲ್ಲೇ ಇದ್ದರೆ ಅಣ್ಣ ತನಗಿನ್ನೇನು ಅಪಾದನೆ ಹೊರಿಸುವನೊ ಎಂದು ಚಡಪಡಿಸಿದ. ಈ ಹೊತ್ತಿನ ಲಕ್ಷ್ಮಣನ ಚಿತ್ರವನ್ನು ಕವಿ ಸಹಜ ಸೌಂದರ್ಯದಿಂದ ಚಿತ್ರಿಸುತ್ತಾನೆ. 'ಉಕ್ಕಿದವು ಕಂಬನಿಗಳ್, ಅಧರೋಷ್ಠ ಮದುರಿತು, ಅಲತಿರುಪಿದೊಲ್ ಆಯಿತೊಡಲ್, ಎದೆವರಿಯದೆ ಉಸಿರೊಕ್ಕುದು, ಉರೆ ಕಂಪಿಸಿದುದವಯವಂ, ಕರಗಿದುದು ಎದೆ, ಸೈರಣೆ ಸಮತೆಗೆಟ್ಟುದು, ಸಿಕ್ಕಿದುವು ಕಂಠದೊಳ್ ಮಾತುಗಳ್, ಸೆರೆಬಿಗಿದು ಮಿಕ್ಕುಮೀರುವ ಶೋಕದಿಂದ ಬೆಂಡಾಗಿ ಕಡುಗಕ್ಕಸದ ಕೆಲಸಮನ್ ಉಸಿರಲರಿಯದೆ,' ಸೀತೆಯ ಮೇಲಿನ ಅಪವಾದವನ್ನೂ, ಆಕೆಯ ಬಗ್ಗೆ ರಾಮನ ನಿರ್ಧಾರವನ್ನೂ ತಿಳಿಸಿ, ಗೋಳಾಡುತ್ತ, ತಾನು ಅರಣ್ಯಕ್ಕೆ ಬಂದ ಉದ್ದೇಶವನ್ನು ತಿಳಿಸಿದನು.

ತನ್ನ ಸರ್ವಸ್ವವಾದ ರಾಮ ಹೀಗೆ ಮಾಡುವನೆಂದು ಕನಸುಮನಸಿನಲ್ಲೂ ಒಮ್ಮೆಯೂ ಯೋಚಿಸಿರದ ನಿಷ್ಕಪಟಿ ಸೀತೆಗೆ, ಲಕ್ಷ್ಮಣನ ಮಾತು ಇನ್ನೂ ಪೂರ್ತಿ ಕಿವಿಗೆ ಬಿದ್ದೇ ಇಲ್ಲ, ಆಗಲೇ "ಬಿರುಗಾಳಿ ಪೊಡೆಯಲ್ಕೆ ಫಲಿತ ಕದಳಿ ಮುರಿದಿಳೆಗೊರಗುವಂತೆ ಹಮ್ಮೈಸಿ ಬಿದ್ದಳಂಗನೆ ಧರೆಗೆ". ನಡನಡುಗುತ್ತ ಲಕ್ಷ್ಮಣ, ಸೀತೆಯ ಸ್ಥಿತಿಗೆ ಮರುಗಿ, ಉಕ್ಕಿಬಂದ ದುಃಖದಿಂದ ಗಟ್ಟಿಯಾಗಿ ಅಳುತ್ತ ಸೀತೆಗೆ ತಣ್ಣೀರೆರಚಿ, ಗಾಳಿಬೀಸಿ, ಬಿಸಿಲಿಂದ ರಕ್ಷಿಸಲು ಕಮಲದೆಲೆಗಳಿಂದ ಸೀತೆಯನ್ನು ಮರೆಮಾಡಿ ಉಪಚರಿಸುತ್ತಿದ್ದನು. ಅಲ್ಲಿಲ್ಲ ಎದ್ದು ಕಾಣುವ ಲಕ್ಷ್ಮಣನ ಮೃದುಹೃದಯ, ಸೀತೆಯ ಬಗೆಗಿನ ಅವನ ಅನುತಾಪ, ಮನದ ತುಮಲಗಳು ಅತ್ಯಂತ ಸೊಗಸಾಗಿ ಚಿತ್ರಿಸಲ್ಪಟ್ಟು ಮನಮುಟ್ಟುವಂತಿವೆ. ದೀನಾವಸ್ಥೆಯಲಿರುವ ಸೀತೆಯ ಚಿತ್ರವೇ ಬೇರೆ. ಮೆಲ್ಲನೆ ಚೇತರಿಸಿ ಕೊಂಡ ಆಕೆಯಾದರೋ, ದೈನ್ಯದಿಂದ ಲಕ್ಷ್ಮಣನನ್ನು ನೋಡುತ್ತಾ, ನಿಟ್ಟುಸಿರಿನಿಂದ, "ಕೊಯ್ಯಲೊಲ್ಲದೆ ಕೊರಳನಿಂತುಮೆನ್ನಂ ಬಿಡಲ್ ಮಾಡಿದಪರಾಧಮುಂಟೆ, ಕಯ್ಯಾರೆ ಖಡ್ಗಮಂ ಕೊಟ್ಟು ತನ್ನರಸಿಯಂ ಹೊಯ್ಯೆಂದು ಪೇಳದಡವಿಗೆ ಕಳುಹಿಬಾರೆಂದನ್, ಆಯ್ಯಯ್ಯೊ ರಾಘವಂ ಕಾರುಣ್ಯನಿಧಿ" ಎನ್ನುತ್ತ ಮತ್ತೆ ಮತ್ತೆ ಕಂಬನಿಗರೆದಳು. ಸೀತೆಯ ಮಾತಿನಲ್ಲಡಕವಾಗಿರುವ ವ್ಯಂಗ್ಯ ಗಮನಾರ್ಹ "ಮಿಥಿಳೇಂದ್ರ ವಂಶದೊಳ್ ಜನಿಸಿ ರಘುಕುಲದ ದಶರಥ ನೃಪನ ಸೊಸೆಯಾಗಿ ಅಕಟ ಕಟ್ಟಡವಿಯೊಳ್ ವ್ಯಥಿಸುವಂತಾದ ವಿಧಿ" ಎನ್ನುತ್ತ ತನ್ನ ಅನಾಥತನವನ್ನು ನೆನೆಸಿಕೊಳ್ಳುತ್ತಲೇ ದುಃಖಿಸುತ್ತ, ಶ್ರೀರಾಮನಿಗಾಗಿ ಹಂಬಲಿಸುತ್ತ ಮತ್ತೆ ಮತ್ತೆ ಮೂರ್ಛೆ ಹೋಗುತ್ತಿದ್ದಳು. ಈ ಸಂದರ್ಭ ವರ್ಣಿಸಲದಳವಾದ್ದು. ತನ್ನನ್ನು ಬಿಟ್ಟು ಹೋಗಲಾರದ ಲಕ್ಷ್ಮಣನನ್ನು ಕಂಡು, ಈ ಸಮಯದಲ್ಲೂ ಸೀತೆಗೆ ಕನಿಕರ ಮೂಡಿರಬೇಕು. ಮನವನ್ನು ಕೊಂಚ ಸ್ತಿಮಿತಕ್ಕೆ ತಂದು ಕೊಂಡು, 'ಲಕ್ಷ್ಮಣ ನಿನ್ನೊಂದಿಗೆ ಮಾತನಾಡಿ ಫಲವೇನು ನೀನೇನು ಮಾಡಲು ಸಾಧ್ಯ? ಇಲ್ಲಿಂದ ನೀನು ಹೊರಟ ಹೋಗು. ದುಃಖಮಯವಾದ ಈ ಪ್ರಾಣವನ್ನು ಕಳೆದುಕೊಳ್ಳೋಣವೆಂದರೆ, ಆಯ್ಯೋ! ಗರ್ಭವತಿಯಾಗಿರುವೆನಲ್ಲ! ಆದದ್ದೆಲ್ಲ ಆಗಲಿ, ಊರಿಗೆ ಮರಳಿ ಕೌಸಲ್ಯೆಗೆ ನನ್ನವೇದನೆಯನ್ನು ತಿಳಿಸಿ, 'ಅಪರಾಧವೊಂದುಮಿಲ್ಲದೆ ತನ್ನ ಕಂದನೆನ್ನಂ ತೊರೆದುದಂಹೇಳು' ಎನ್ನುತ್ತಾಳೆ. ದುಃಖದಾಳದಿಂದ ಚಿಮ್ಮುವ ಸೀತೆಯ ಈ ಮಾತುಗಳು ಬಹಳ ಶಕ್ತಿಶಾಲಿಯಾಗಿವೆ. ಅಲ್ಲಿ ನಿಂತ ಲಕ್ಷ್ಮಣನನ್ನು ಕುರಿತು "ಏಕೆ ನಿಂದಿಹೆ ಪೋಗು ಸೌಮಿತ್ರಿ, ಕೋಪಿಸನೆ ಕಾಕುತ್ಸ್ಥನಿಲ್ಲಿ ತಳುವಿದೊಡೆ; ನೆರವುಂಟು ನನಗೀ ಕಾಡೊಳುಗ್ರ ಜಂತುಗಳು; ಅಲ್ಲಿ ರಘುನಾಥನೇಕಾಕಿಯಾಗಿರ್ಪನು" ಎನ್ನುತ್ತಾಳೆ. ಸೀತೆಯ ಈ ಪರಿಣಾಮಕಾರಿಯಾದ ನಾಟಕೀಯ ಮಾತುಗಳು ಅತ್ಯಂತ ಸಹಜವಾಗಿದ್ದು, ಅನ್ಯಾಯಕ್ಕೊಳಗಾದ ದುಃಖತಪ್ತ ಹೆಣ್ಣಿನ ಸ್ಥಿತಿಗೆ ಸರಿಯಾಗಿಯೇ ಇದೆ. 'ರಾಜನೊಬ್ಬ ರಾಜ್ಯದಲ್ಲಿ ಕ್ರೂರ ಕೃತ್ಯವೆಸಗಿದರೂ ಪ್ರಜೆಗಳು, ಪರಿವಾರದವರು ಇದು ನ್ಯಾಯನ್ಯಾಯವೆಂದು ಹೇಳಲಿಲ್ಲವೆ? ಯಾರಿಲ್ಲದಿದ್ದರೂ ಬೇಡ, ಹನುಮಂತ ಬದುಕಿದ್ದಾನೆಯೇ' ಎಂದು ಕೇಳುತ್ತಾಳೆ. ಈ ಮಾತುಗಳೆಲ್ಲ ಬಹಳ ಮಾರ್ಮಿಕವಾಗಿರುವುದಲ್ಲದೆ, ಸ್ವಾಭಿಮಾನ ಆಕೆಯಲ್ಲೂ ಜಾಗೃತವಾಗಿರುವುದನ್ನು ಸೂಚಿಸುತ್ತವೆ. ಏನಾದರೇನು? ಸೀತೆಯೂ ಸ್ತ್ರೀಯರ ಪತಿಭಕ್ತಿ ಧೋರಣೆಯ ಪ್ರತಿಮೂರ್ತಿತಾನೆ? ಆದ್ದರಿಂದ ಹೇಳುತ್ತಾಳೆ. 'ಯಾರಿದ್ದರೇನು? ಎಲ್ಲ ಭ್ರಮೆ, ಇದೆಲ್ಲ ನನ್ನದೇ ತಪ್ಪು ಕರುಣಾಳು ರಾಘವನಲ್ಲಿ ತಪ್ಪಿಲ್ಲ, ಕಡುಪಾತಕಂ ಗೈದು, ಪೆಣ್ಣಾಗಿ ಸಂಭವಿಸಿದೊಡಲಂ ಪೊರೆವುದೆನ್ನೊಳಪರಾಧಮುಂಟು' ಎಂದು ಕೊಳ್ಳುತ್ತಾಳೆ. ಮೊದಲಿಂದ ತಾನು ಪಟ್ಟಪಾಡನ್ನೆಲ್ಲ ನೆನೆಸಿಕೊಂಡಾಗ ಸೀತೆಗೆ ಹೀಗೆ ಆ ಅನ್ನಿಸುವುದು ಸಹಜವೇ ಇದ್ದಿರಬೇಕು. ಮುಂದೆ 'ಲಕ್ಷ್ಮಣಾ ನೀನಿಲ್ಲಿರಬೇಡ ನೀನು ಹೋಗುವ ಮಾರ್ಗದಲ್ಲಿ ಹೆಜ್ಜೆಹೆಜ್ಜೆಗೂ ಸುಖವಾಗಲಿ' ಎಂದು ಹೇಳಿ ಕಣ್ಣೀರನ್ನು ಒರೆಸಿಕೊಳ್ಳುವ ಸೀತೆಯ ಚಿತ್ರ ಕಲ್ಲನ್ನೂ ಕರಗಿಸುವಂತಹುದು.

ಸೀತೆಯ ರಕ್ಷಣೆಯನ್ನು ತನ್ನಿಂದ ಮಾಡಲಾಗದ್ದಕ್ಕೆ ಪರಿತಪಿಸುತ್ತ, ಲಕ್ಷ್ಮಣ, ಕಡೆಗೆ ಅಲ್ಲಿದ್ದ ಅರಣ್ಯದ ಅಭಿಮಾನದೇವತೆಗಳನ್ನೇ ಸೀತೆಯನ್ನು ಕಾಪಾಡುವಂತೆ ಕೋರುತ್ತಾನೆ. ಲೋಕಪಾವನೆಯಾದ ಗಂಗೆಯನ್ನು ಸೀತೆಯನ್ನು ಆದರದಿಂದ ಕಾಣುವಂತೆ ಪ್ರಾರ್ಥಿಸುತ್ತಾನೆ. ಭೂದೇವಿಗೆ ತನ್ನ ಮಗಳನ್ನು ಕಾಪಾಡುವಂತೆ ಹೇಳಿ ನಮಸ್ಕರಿಸುತ್ತಾನೆ. ಈ ದೃಶ್ಯವಂತೂ ಹೃದಯಾರ್ದ್ರದಾಯಿ. ಆದರೆ ದುಃಖದಿಂದ ಭೂಮಿಯಲ್ಲಿ ಬಿದ್ದು ಹೊರಳುತ್ತಿರುವ ಸೀತೆಯನ್ನು ಕಂಡು ಮತ್ತಷ್ಟು ಶೋಕಿತನಾಗಿ ಕರುಣೆಯಿಲ್ಲದೆ ನಿಷ್ಠುರ ಮನಉಳ್ಳ ಕ್ರೂರಾತ್ಮರ ಬಾಳನ್ನು ಸುಡಲಿ ಎಂದು ಶಪಿಸುತ್ತ ಹೋಗಲಾರದವನಾಗಿ, ತೂಗುಯ್ಯಾಲೆಯಂತಾಗುತ್ತಾನೆ. ಅಂತೂ ಕಡೆಗೆ ಸೀತೆಯನ್ನು ವಿಧಿಯಿಲ್ಲದೆ, ತಾಯನೆಳಗರು ಬಿಡುವಂತೆ ಅಗಲುತ್ತಾನೆ. ಸಹಜವಾತ್ಸಲ್ಯ ಪೂರಿತವಾದ ಈ ಚಿತ್ರವಂತೂ ವರ್ಣಿಸಲಾಗದ ಅನುಕಂಪೆಯನ್ನು ಓದುಗನಲ್ಲಿ ಮೂಡಿಸುತ್ತದೆ. ಮುಂದೆ ಕವಿ ಚಿತ್ರಿಸುವ ಭಯ, ಶೋಕಗಳಿಂದ ಬಾಯಾರಿ ಕೂಗಿ ಕೊಳ್ಳುತ್ತಿರುವ, ಕಣ್ಣೀರ ಪ್ರವಾಹದಲ್ಲಿ ಏಳುತ್ತ, ಮುಳುಗುತ್ತ ಹೊರಳಾಡುತ್ತ, 'ಲಕ್ಷ್ಮಣ ಇದ್ದಾನೊ, ಹೊರಟು ಹೋದನೋ' ಎಂದು ಮತ್ತೆ ಮತ್ತೆ ನೋಡುತ್ತಿರುವ ಸೀತೆಯ ಚಿತ್ರ; ಲಕ್ಷ್ಮಣನಾದರೋ ಹೊರಟ ಮಾರ್ಗದಲ್ಲ ಮತ್ತೆ ಮತ್ತೆ ತಿರುಗಿ ನೋಡುತ್ತ, ಸೀತೆಯನ್ನಗಲಲಾರದೆ ಬಾಡುತ್ತ, ಸಂಕಟಪಡುತ್ತ, ಅಲ್ಲಲ್ಲೆ ನಿಂತು ಗಟ್ಟಿಯಾಗಿ ಅಳುತ್ತ, ಹುಚ್ಚನಂತೆ ಬಳಲುತ್ತ ಕಡೆಗೆ ಗಂಗೆಯನ್ನು ದಾಟಿದ ದೃಶ್ಯವಂತೂ ಹೃದಯವನ್ನಿರಿಯುವಂತೆ ಬಹಳ ಸೊಗಸಾಗಿ ಚಿತ್ರವಾಗಿದೆ.

ಸೀತಾಪರಿತ್ಯಾಗವನ್ನು ವಸ್ತುವಾಗಿ ಉಳ್ಳ ಕನ್ನಡ, ಸಂಸ್ಕೃತ ಕೃತಿಗಳು ಸಾವಿರಾರು ವರ್ಷಗಳಿಂದ ರಚಿತಗೊಂಡು ಬಂದಿವೆ. ಇವುಗಳಲ್ಲಿ ಅನೇಕ ಕೃತಿಗಳು ಲಕ್ಷ್ಮೀಶನ ಮೇಲೆ ನೇರ ಪ್ರಭಾವ ಬೀರಿರುವುದು ಸತ್ಯಸಂಗತಿ. ಆದರೆ ಇತರರ ಪ್ರಭಾವ ಉಳಿಸಿಕೊಂಡು, ಲಕ್ಷ್ಮೀಶ ತನ್ನ ಸ್ವಪ್ರತಿಭೆಯನ್ನು ಮೆರೆದಿರುವುದು ವಿಶೇಷ ಸಂಗತಿ. ಲಕ್ಷ್ಮೀಶನ ಶ್ರೇಷ್ಠ ಪ್ರತಿಭೆಗೆ ಇದೇ ಸಾಕ್ಷಿ. ಅಸಾಧಾರಣ ಪ್ರತಿಭೆ, ಪಾಂಡಿತ್ಯಗಳಿಂದಾಗಿ, ಲಕ್ಷ್ಮೀಶನಿಗೆ ಕನ್ನಡ ಸಾಹಿತ್ಯ ವಿಶಿಷ್ಟವಾದ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟಿದೆ. ★

## ಕಿಶೋರಜಗತ್

# ಪುಣ್ಯಶೀಲ - ಸುಶೀಲ

ವಿದ್ವಾನ್ ಬಿ. ನ. ಗುಂಡೂರಾವ್

ಅನಂತ ಶಯನದ ದೇವಮಂದಿರ. ಪದ್ಮನಾಭ ಸರ್ಪದ ಹಾಸಿಗೆಯ ಮೇಲೆ ಶಾಂತವಾಗಿ ಮಲಗಿದ್ದಾನೆ. ಭೋಗೀನ್ದ್ರಶಾಯಿಯ ಸೌಂದರ್ಯ-ವೈಭವ-ಕಂಡು ಆನಂದಿಸಲು, ದೇವದೇವನ ಸೇವೆ ಮಾಡಿ ಧನ್ಯರಾಗಲು ಸಹಸ್ರ ಸಹಸ್ರ ಭಕ್ತರು ಬರುತ್ತಾರೆ. ಪುಣ್ಯಜೀವಿಗಳಿಗೆ ಮಾತ್ರ ಅನಂತಪದ್ಮನಾಭ ತನ್ನ ಅನಂತ ಕೃಪೆಯನ್ನು ಅನುಗ್ರಹಿಸುತ್ತಾನೆ. ಸ್ವಾಮಿಯ ಸಾಮೀಪ್ಯ ಸೌಖ್ಯವನ್ನು ಪಡೆದು ಆತನ ಚರಣಸೇವಾ ಧುರೀಣರಾಗಿ, ನಿರಂತರ ಆನಂದ ಆಂದೋಳಿತ ಅನ್ತಃಕರಣರಾಗಿರುವವರನ್ನು – ಪದ್ಮನಾಭನ, ದೇವಸಭಾ ಸದಸ್ಯರನ್ನು – ಪಾರ್ಷದರೆಂದು ಕರೆಯುತ್ತಾರೆ. ಈ ಪಾರ್ಷದರು ಪದ್ಮನಾಭನ ಪರಿಷತ್ ಸದಸ್ಯರು, ಆಪ್ತರು, ಕೃಪಾಕಾಂಕ್ಷಿಗಳು, ಕೃಪಾಪಾತ್ರರು.

ಅನಂತಶಯನದಲ್ಲಿ ಹಿಂದೊಮ್ಮೆ ಬಿಡಾರ ಮಾಡಿದ್ದ ಚೋಳರಾಜರು ಸ್ವಾಮಿ ದರ್ಶನಾರ್ಥವಾಗಿ ಪ್ರಭಾತ ಹಾಗೂ ಪ್ರದೋಷ ಎರಡೂ ವೇಳೆಯಲ್ಲಿ ದೇವಾಲಯಕ್ಕೆ ತಪ್ಪದೆ ಬರುತ್ತಿದ್ದರು. ಚೋಳರಾಜ ತನ್ನ ಆರಾಧ್ಯ ಸ್ವಾಮಿಗಾಗಿ ಒಂದು ದಿನ ಚಿನ್ನದ ಸಹಸ್ರನಾಮಮಾಲಿಕೆ ಮಾಡಿಸಿ ತಂದ. ವಿಷ್ಣು ಸಹಸ್ರನಾಮಾವಳಿ ಒಂದೊಂದು ಚಿನ್ನದ ಮೋಹರಿನ ಮೇಲೂ ಕೆತ್ತಲಾಗಿತ್ತು. ಒಂದೊಂದು ನಾಮಕ್ಕೊಂದೊಂದು ಮೊಹರು. ಸಹಸ್ರ ನಾಮಮಾಲಿಕೆ ರತ್ನ ಖಚಿತವಾಗಿತ್ತು. ಪದ್ಮನಾಭನಿಗೆ ಮಾಲಾರ್ಪಣೆ ಮಾಡಿ ನೋಡಿ ಸಂತೋಷ ಪಡುವುದು ರಾಜನ ಉದ್ದೇಶ, ಆದರೆ ಚಿನ್ನರನ್ನಗಳ ಬಾಹುಳ್ಯ ರಾಜನಿಗೆ ಅಹಂಕಾರವನ್ನು ತಂದಿತ್ತು.

“ನನಗೆ ರಾಜಪದವಿಯನ್ನು ಅನುಗ್ರಹಿಸಿದ ಸ್ವಾಮಿ ನನ್ನ ಹೃದಯದಲ್ಲಿ ಭಕ್ತಿ ಮಂದಾಕಿನಿಯನ್ನೂ ಪ್ರತಿಷ್ಠಿಸಿದ್ದಾನೆ. ನಾನು ಸಮರ್ಪಿಸಿದ ನವರತ್ನ ಖಚಿತ ಸಹಸ್ರನಾಮ ಮಾಲಿಕೆ ಪದ್ಮನಾಭನನ್ನು ಶೋಭಾಜಲಧಿಯನ್ನಾಗಿ ಮಾಡಿದೆ”– ಮಹಾರಾಜ ಯೋಚಿಸಿದ

ಎದುರಿಗೆ ಪದ್ಮನಾಭ, ಸಿರಿದೇವಿಗೆ ತನ್ನ ಚರಣ ಸೇವಾ ಭಾಗ್ಯವನ್ನು ಕರುಣಿಸಿ ಮಲಗಿದ್ದಾನೆ. ಚೋಳರಾಜ, ಕರ್ಪೂರದಾರತಿಯ ಬೆಳಕಿನಲ್ಲಿ ನಿಗಿ ನಿಗಿ ಹೊಳೆಯುತ್ತಿರುವ–ತಾನು ಅರ್ಪಿಸಿರುವ ಹೇಮಮಾಲಿಕೆಯನ್ನು ನೋಡುತ್ತಿದ್ದಾನೆ. ಕೈಗಳೇನೋ ಮುಗಿದಿವೆ, ಆದರೆ ಮನಸ್ಸು ?

ಅಷ್ಟರಲ್ಲಿ ದೇವಾಲಯಕ್ಕೆ ವಿಷ್ಣು ದಾಸನೆಂಬಾತ ಬಂದ. ಆತ ಸಾಮಾನ್ಯ ಮನುಷ್ಯ. ನೋಡಲು ಅಷ್ಟು ರೂಪವಂತನೂ ಅಲ್ಲ. ಪರಿಗಣಿಸಲು ಅಷ್ಟು ಸಿರಿವಂತನೂ ಅಲ್ಲ. ಬ್ರಾಹ್ಮೀಮುಹೂರ್ತಕ್ಕೆದ್ದು ಹೋಗಿ ತುಲಸಿ ಸಂಗ್ರಹಿಸುವುದು–ಅದನ್ನು ಹಾರ ಮಾಡಿ, ಪದ್ಮನಾಭನಿಗೆ ಸಮರ್ಪಿಸುವುದು; ಆತನ ಪದ್ಧತಿ. ಅದ್ಯಂತರಹಿತ, ಆನಂದ, ಪಾಹಿ ಪದ್ಮನಾಭ ಪ್ರಭೂ – ಎಂದು ಸ್ವಾಮಿಯ ಮುಂದೆ ಸಾಷ್ಟಾಂಗ ದಂಡ ಪ್ರಣಾಮ ಮಾಡಿದ, ತುಲಸಿ ಹಾರವನ್ನು ಸ್ವಾಮಿಗೆ ಸಮರ್ಪಿಸಿದ. ಇದು ಚೋಳ ರಾಜನಿಗೆ ಅಸಮಾಧಾನವಾಯಿತು. ಏಕೆಂದರೆ ಈ ಹಾರದಿಂದ ತಾನು ಸಮರ್ಪಿಸಿದ್ದ ನವರತ್ನ ಖಚಿತ ಹೇಮಮಾಲೆ ಮುಚ್ಚಿಹೋಗುತ್ತದೆಂದು ರಾಜನ ಅಭಿಪ್ರಾಯ, ಹೊಲಗದ್ದೆಗಳ ಅಂಚಿನಲ್ಲಿ ಬೆಳೆದ ಕೆಲಸಕ್ಕೆ ಬಾರದ ತುಲಸಿ ಎಲ್ಲಿ? ಚೋಳ ರಾಜನ ಪರಮಭಕ್ತಿಯೇ ಹೆಣೆದು ಪೋಣಿಸಿದಂತಿರುವ ಸಹಸ್ರನಾಮ ಮಾಲಿಕೆಯೆಲ್ಲಿ ? ಈ

“ಕ್ಷಮಿಸ ಬೇಕು ಇದು ಚರ್ಚೆಯವಿಷಯವೇ ಅಲ್ಲ, ಶಾಸ್ತ್ರ ಸಮ್ಮತವಾದ ವಿಷಯ. ಪತ್ರಂ – ಪುಷ್ಪಂ – ಫಲಂ – ತೋಯಂ ಯೋಮೇ ಭಕ್ತ್ಯಾ ಪ್ರಯಚ್ಛತಿ – ಎನ್ನುತ್ತದೆ ಭಗವದ್ಗೀತೆ–ಅದರಲ್ಲಿ ಮಹಾರಾಜ–ದೀನದರಿದ್ರ–ರತ್ನಹಾರ ಮುಂತಾದುವುಗಳ ಪ್ರಸ್ತಾಪ ಮಾಡಿಲ್ಲ.”

– ವಿಷ್ಣು ದಾಸ ನಸುನಗುತ್ತ ನುಡಿದ.

“ಹಾಗಾದರೆ ದೈವಸಾಕ್ಷಾತ್ಕಾರ ನಿನಗೆ ಮೊದಲು ಲಭ್ಯವಾದೀತೋ? ನಮಗೆ ಮೊದಲು ಲಭ್ಯವಾದೀತೋ!!”

ಚೋಳ ರಾಜ ಸ್ವಲ್ಪ ಬಿರುಸಾಗಿ ಮಾತಾಡಿದ.

“ಹರಿಹರಿ ಅಷ್ಟು ದೊಡ್ಡ ಮಾತೇಕೆ ಆತನ ಕೃಪೆಯಿದ್ದಂತಾಗುತ್ತದೆ”

– ವಿಷ್ಣು ದಾಸನ ಮಾತಿನಲ್ಲಿ ಗಾಂಭೀರ್ಯ ತುಂಬಿತ್ತು.

ಅವಿವೇಕಿಗೆ ಔಚಿತ್ಯಜ್ಞಾನವಾದರೂ ಇದೆಯೇ ?– ಎಂದು ಚೋಳರಾಜ ಬೆಳುನುಡಿಯಲ್ಲಿ ಮಾತಾಡಿದ. ಇದರ ಹಿಂದೆ ಅಧಿಕಾರದ, ಐಶ್ವರ್ಯದ ಅಹಂಕಾರ ಇಣುಕಿ ನೋಡುತ್ತಿತ್ತು.

“ಮಹಾ ಪ್ರಭುಗಳು ಮನ್ನಿಸಬೇಕು, ಪದ್ಮನಾಭನಿಗೆ ಬೇಕಾದ್ದು ಭಾವಶುದ್ಧಿಯೇ ವಿನಹ ರತ್ನರಾಶಿಗಳಲ್ಲ. ತುಲಸಿಯಾಗಲೀ – ಸುವರ್ಣ ಮಾಲಿಕೆ ಯಾಗಲೀ–ಸ್ವಾಮಿಯ ಅನಂತ ಕೋಟಿ ಸೌಂದರ್ಯದ ಮುಂದೆ ಸೊಳ್ಳೆಗೂ ಸಮಾನವಲ್ಲದ ತುಚ್ಛ ವಸ್ತುಗಳು, ಅವು ಆ ಮಹಾಮಹಿಮನ ಸೌಂದರ್ಯವನ್ನು ಹೆಚ್ಚಿಸಲೂ ಸಾಧ್ಯವಿಲ್ಲ, ಮುಚ್ಚಿಡಲೂ ಸಾಧ್ಯವಿಲ್ಲ, ನಾವು ಅರ್ಪಿಸುವ ವಸ್ತು ಯಾವುದೇ ಆಗಿರಲಿ ಅದರ ಹಿಂದೆ ಪ್ರೇಮ ಪೂರ್ಣ ಹೃದಯದ ರಸಭಾವಲಹರಿಯೊಂದಿದ್ದರೆ ಸಾಕು, ಪದ್ಮನಾಭ ಸುಪ್ರೀತನಾಗುತ್ತಾನೆ”.

– ವಿಷ್ಣು ದಾಸ ಗಂಭೀರವಾಗಿ ನುಡಿದ

“ಚರ್ಚೆಮಾಡುವ ನಿನಗೆಷ್ಟು ಕೆಚ್ಚು? ಅದೂ ಮಹಾಪ್ರಭುಗಳೊಡನೆ”

– ಅರ್ಚಕರು ಮಾತಾಡಿದರು.

ಈ ಘಟನೆಯಾದ ಕೆಲವೇ ದಿನಗಳಲ್ಲಿ ಚೋಳ ನರೇಂದ್ರ ವೇದವೇತ್ತರನ್ನು ಕರೆಸಿ – ವಿಷ್ಣುಯಜ್ಞವನ್ನಾಚರಿಸಬೇಕೆಂದು ವ್ಯವಸ್ಥೆ ಮಾಡಿದ. ಚೋಳ ನರೇಂದ್ರನ ರಾಜಧಾನಿಯಾದ ಕಾಂಚೀನಗರದಲ್ಲಿ ತಾಮ್ರಪರ್ಣಿನದೀತಟದಲ್ಲಿ ಯಜ್ಞಶಾಲೆ ನಿರ್ಮಿತವಾಯ್ತು. ರಾಜೋಚಿತ ವೈಭವದಿಂದ ಯಜ್ಞದ ಸಿದ್ಧತೆಗಳು ಬಿರುಸಾಗಿ ನಡೆದವು. ಶುಭಮುಹೂರ್ತದಲ್ಲಿ ಸ್ವಸ್ತಿವಾಚನಾನಂತರ ಯಜ್ಞ ಪ್ರಾರಂಭವಾಯ್ತು. ಕಾಂಚೀನಗರದಲ್ಲಿ ಈ ಮಹಾಯಜ್ಞದ ಅಂಗವಾಗಿ ಲಕ್ಷ ಲಕ್ಷ ಜನಕ್ಕೆ ಅಖಂಡ ಅನ್ನದಾನ ನಡೆಯುತಕ್ಕದ್ದೆಂದು ರಾಜಾಜ್ಞೆಯಾಗಿತ್ತು. ಚೋಳರಾಜ ಪರಮ ವೈಭವದಿಂದ ಅಪಾರದ್ರವ್ಯ ಖರ್ಚುಮಾಡಿ ಅದ್ದೂರಿಯಾಗಿ ಆಚರಿಸುತ್ತಿದ್ದ ಯಜ್ಞದ ಸಮಾಚಾರ, ಹೋಮ ಧೂಮದ ಜೊತೆಯಲ್ಲಿ ಎಲ್ಲ ಕಡೆಗೂ ಪ್ರಸರಿಸಿತು. ಅನಂತಶಯನಕ್ಕೂ ಸುದ್ದಿ ಹರಡಿತು. ಆ ವೇಳೆಗೆ ವಿಷ್ಣುದಾಸ ಕ್ಷೇತ್ರಸನ್ಯಾಸಗ್ರಹಣ ಮಾಡಿದ್ದ. ಪದ್ಮನಾಭನ ಸೇವೆಮಾಡುತ್ತ ಆ ಕ್ಷೇತ್ರದಲ್ಲೇ ವಾಸಿಸುತ್ತಿದ್ದ. ಕಾಂಚಿಯ ಯಜ್ಞವಾರ್ತೆ ಕೇಳಿ ಆತನ ಮನಸ್ಸು ಉದ್ವೇಗಪಡಲಿಲ್ಲ. ಸ್ವಾಮಿಯದರ್ಶನವಾಗುವವರೆಗೆ ಕ್ಷೇತ್ರ ಬಿಟ್ಟು ಕದಲುವುದಿಲ್ಲವೆಂದು ಸಂಕಲ್ಪಿಸಿಕೊಂಡು ಸೇವೆ ಮಾಡುತ್ತ ಕಾಲ ಕಳೆಯುತ್ತಿದ್ದ. ಪದ್ಮನಾಭನಿಗೆ ನಿವೇದನೆ ಮಾಡಿದ ಹೊರತು ವಿಷ್ಣುದಾಸ ಯಾವ

ಆಹಾರವನ್ನೂ ಸೇವಿಸುತ್ತಿರಲಿಲ್ಲ. ಬರಬರುತ್ತ ಇದು ಆತನ ಜೀವನ ವ್ರತವಾಯ್ತು-ಬಾಳಿನ ನಿಷ್ಠೆಯಾಯ್ತು. ಕೆಲವು ದಿನಗಳು ಹೀಗೆ ಉರುಳಿದವು. ಒಂದು ದಿನ ವಿಷ್ಣುದಾಸ ತಾನು ಸಿದ್ಧಪಡಿಸಿದ್ದ ನೈವೇದ್ಯ ಸಾಮಾಗ್ರಿ – ಕಣ್ಮರೆಯಾಗಿದ್ದುದನ್ನು ಕಂಡು ಗಾಬರಿಪಟ್ಟ. ನಿರಂತರವಾಗಿ ಒಂದು ವಾರ, ನೈವೇದ್ಯಸಾಮಗ್ರಿ ಕಣ್ಮರೆಯಾಯ್ತು. ಆ ಭಕ್ತನಿಗೆ ಬಲವಾದ ಚಿಂತೆಯಾಯ್ತು. ಅದು ತಾನು ಹಸಿದಿರಬೇಕಾಗಿ ಬಂತೆಂಬ ಚಿಂತೆಯಲ್ಲ. ಸ್ವಾಮಿಗಾಗಿ ಸಿದ್ಧಮಾಡಿದ್ದ ವಸ್ತು ಏನಾಗುತ್ತಿದೆ? ಯಾರು ತೆಗೆದುಕೊಳ್ಳುತ್ತಿದ್ದಾರೆ ? ಯಾವ ಪ್ರಾಣಿ ಅದನ್ನು ಹೊತ್ತುಕೊಂಡು ಹೋಗುತ್ತಿರಬಹುದು ? – ಯಾವುದೂ ಬಗೆಹರಿಯಲಿಲ್ಲ. ಸ್ವಾಮಿಗೆ ನಿವೇದನೆ ಮಾಡದೆ ಆತ ಏನನ್ನೂ ಆಹಾರವಾಗಿ ಸೇವಿಸುತ್ತಿರಲಿಲ್ಲ. ಉಪವಾಸವೂ ಒಂದು ತಪಸ್ಸೆಂದೇ ಭಾವಿಸಿದ ವಿಷ್ಣುದಾಸ ಪೂಜೆ ಭಜನೆಗಳಲ್ಲೇ ವೇಳೆ ಕಳೆಯುತ್ತಿದ್ದ. ಆದರೂ ಯೋಚನೆ ಕಾಡುತ್ತಲೇ ಇತ್ತು – ಸಿದ್ಧಪಡಿಸಿದ ನೈವೇದ್ಯ ಸಾಮಗ್ರಿ ಏನಾಗುತ್ತಿದೆ ?

ಏನಾದರಾಗಲಿ, ಈ ರಹಸ್ಯವನ್ನು ಪತ್ತೆ ಹಚ್ಚಲೇಬೇಕೆಂದು ವಿಷ್ಣುದಾಸ ಸಂಕಲ್ಪಿಸಿದ. ಅಂದಿಗೆ ಆತ ಊಟಮಾಡಿ ಎಂಟುದಿನ ಕಳೆದು ಒಂಭತ್ತನೆ ದಿನ ಪ್ರಾರಂಭವಾಗಿತ್ತು. ಯಾರು ಬರುವರೋ ನೋಡಲೇಬೇಕೆಂದು ಕುಳಿತ ತನ್ನ ಗುಡಿಸಿಲಿನಲ್ಲಿ. ಮನೆಯವರು ಎಚ್ಚತ್ತು ಕುಳಿತಿರುವಾಗ ಯಾವ ಕಳ್ಳನೂ ಬರಲಾರ. ಕೂತು ಕೂತು ವಿಷ್ಣುದಾಸನಿಗೆ ಬೇಸರವಾಯ್ತು. ಎಂಟು ದಿನದಿಂದ ಆಹಾರವಿಲ್ಲದ್ದರಿಂದ ಅವನಿಗೆ ಸಾಕಷ್ಟು ಆಯಾಸವೂ ಆಗಿತ್ತು. ಕುಳಿತಲ್ಲೇ ಕಂಭಕ್ಕೆ ಒರಗಿ ತೂಕಡಿಸಲಾರಂಭಿಸಿದ. ಸ್ವಲ್ಪ ನಿದ್ರೆಯೂ ಬಂದಿರಬಹುದು. ಅಷ್ಟರಲ್ಲಿ ತಟಕ್ಕನೆ ಕಣ್ಣು ಬಿಟ್ಟು ನೋಡುತ್ತಾನೆ – ಕ್ಷಯರೋಗಿಯಂತೆ ಕಾಣುತ್ತಿದ್ದ ಒಬ್ಬ ದರಿದ್ರ ವ್ಯಕ್ತಿ ಪಾತ್ರೆಯಲ್ಲಿದ್ದ ಆಹಾರವೆಲ್ಲ ತನ್ನ ಬಟ್ಟೆಯಲ್ಲಿ ಹಾಕಿಕೊಂಡು ತನಗೆ ಸಾಧ್ಯವಾದಷ್ಟು ವೇಗದಲ್ಲಿ ಹೋಗುತ್ತಿದ್ದಾನೆ. ವಿಷ್ಣುದಾಸ ಹಿಂಬಾಲಿಸುತ್ತ ಬರುತ್ತಿರುವುದನ್ನು ಗಮನಿಸಿ ಆತ ಓಡಲಾರಂಭಿಸಿದ. ಸ್ವಲ್ಪದೂರ ಹೋಗಿ ಅಲ್ಲಿ ಉರುಳಿಬಿದ್ದ. ವಿಷ್ಣುದಾಸನಿಗೆ ತುಂಬ ಮರುಕ ಬಂತು. ಅವನನ್ನೆತ್ತಿ ತನ್ನ ತೊಡೆಯಮೇಲಿಟ್ಟುಕೊಂಡು–ತನ್ನ ಹರಕು ಉತ್ತರೀಯದಿಂದ ಗಾಳಿಬೀಸಿ ಶೈತ್ಯೋಪಚಾರ ಮಾಡಿದ. ಹಿಡಿ ಆಹಾರಕ್ಕಾಗಿ ಪರಿತಪಿಸುವ ಈ ಜೀವ ಅದೆಷ್ಟು ಸಂಕಟಪಟ್ಟದೆಯೋ – ಎಂದು ಕನಿಕರ ಪಟ್ಟ. ಇದೆಲ್ಲ ಎರಡು ನಿಮಿಷದಲ್ಲಿ ನಡೆದು ಹೋಯ್ತು. ಮರು ಕ್ಷಣದಲ್ಲೇ – ಆ ದರಿದ್ರವ್ಯಕ್ತಿ ಕಾಣಲಿಲ್ಲ. ಅಲ್ಲಿ ವಿಷ್ಣುದಾಸ ಕಂಡದ್ದೇನು !— ಶಂಖಚಕ್ರಗದಾಪದ್ಮಾದಿಗಳಿಂದ ಶೋಭಿತನಾಗಿ, ಮಂಗಳಕರ ಶೃಂಗಾರ ಮೂರುತಿಯಾಗಿ ದೇವದೇವ ಶ್ರೀಮನ್ನಾರಾಯಣ ಪ್ರತ್ಯಕ್ಷವಾಗಿ ನಿಂತಿದ್ದಾನೆ. ಪೀತಾಂಬರಧಾರಿಯಾಗಿ, ರತ್ನಕಿರೀಟ ಪರಿಶೋಭಿತನಾಗಿ ಕಣ್ಣಮುಂದೆ ನಿಂತು ಮಂದಹಾಸ ಬೀರುತ್ತಿದ್ದ ಭಾಗ್ಯದ ಸುರಧೇನುವನ್ನು, ಭಕ್ತ ಕಲ್ಪತರುವನ್ನು ವಿಷ್ಣುದಾಸ ಕಂಡು ವಿಸ್ಮಿತನಾದ. 'ವನ್ದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಂ' – ಎಂದು ಸ್ವಾಮಿಯ ಪಾದಗಳ ಮೇಲುರುಳಿಬಿದ್ದ, ಧನ್ಯೋಽಸ್ಮಿ – ಎಂದ – ಪುಳಕಿತನಾದ–ಭಗವದನುಗ್ರಹಕ್ಕೆ ಪಾತ್ರನಾದ. ಇದರ ಪರಿಣಾಮವಾಗಿ ವಿಷ್ಣುದಾಸ ಭಗವಂತನ ಸಾಮೀಪ್ಯ, ಸಾರೂಪ್ಯ ಎರಡನ್ನೂ ಪಡೆಯುವಂತಾಯ್ತು.

ಕಂಚಿಯಲ್ಲಿ ನಡೆಯುತ್ತಿದ್ದ ಯಜ್ಞ ಪೂರ್ಣಾಹುತಿಯವರೆಗೂ ಬಂದಿತ್ತು. ಆ ದಿನ ದಿವ್ಯವಾದ್ಯಧ್ವನಿ, ಜಯಧ್ವನಿ ಇದ್ದಕ್ಕಿದ್ದಂತೆ ಗಗನದಲ್ಲಿ ಕೇಳಿಬಂತು. ಯಜ್ಞಶಾಲೆಯಲ್ಲಿದ್ದವರೆಲ್ಲ ಆಶ್ಚರ್ಯಚಕಿತರಾಗಿ ತಲೆಯೆತ್ತಿ ನೋಡುತ್ತಿದ್ದಾರೆ. ದಿವ್ಯ ವಿಮಾನದಲ್ಲಿ ದೇವತೆಗಳು ಒಬ್ಬಾತನನ್ನು ಕರೆದುಕೊಂಡು ಹೋಗುತ್ತಿರುವುದು ಕಂಡುಬಂತು. ಯಾರೀ ಪುಣ್ಯಪುರುಷ ಎಂದು ಯಜ್ಞಮಾಡುತ್ತಿದ್ದ ಚೋಳರಾಜ ಕೇಳಿದ. ಆಗ ಮಂತ್ರದ್ರಷ್ಟಾರರಾದ ವೇದಮೂರ್ತಿಗಳು ಹೇಳಿದರು — ಈತ ವಿಷ್ಣುದಾಸ. ಅನಂತಪದ್ಮನಾಭನ ಪರಮಕೃಪೆಗೆ ಪಾತ್ರನಾಗಿದ್ದಾನೆ ತನ್ನ ಅನನ್ಯ ಭಕ್ತಿಯಿಂದ ಸದಾಕಾಲವೂ ಸ್ವಾಮಿಯ ಸಾನ್ನಿಧ್ಯದಲ್ಲಿ ಪಾರ್ಷದನಾಗಿರುವ ಭಾಗ್ಯವನ್ನು ಪಡೆದಿದ್ದಾನೆ. ಈ ವಿಚಾರವನ್ನು ಕೇಳಿದ ಚೋಳರಾಜ ಬೆರಗಾದ. ಪರಮಭಾಗವತನಿಗೆ ಅಪಚಾರಮಾಡಿದ–ಬಿರನುಡಿಯಾಡಿದ ಗತಘಟನೆಗಳು ನೆನಪಿಗೆ ಬಂತು. ವಿಷ್ಣುದಾಸನಿಗೆ ಅವಮಾನ ಮಾಡಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನನುಭವಿಸಲೇಬೇಕೆಂದು ಯೋಚಿಸಿದ ಚೋಳರಾಜ ಪೂರ್ಣಾಹುತಿಗೆ ಬದಲಾಗಿ—ತಾನೇ ಪೂರ್ಣಾಹುತಿಯಂತೆ ಯಜ್ಞಕುಂಡಕ್ಕೆ ಹಾರಿದ. ಸುತ್ತಲೂ ನೆರೆದಿದ್ದ ಜನ ಭಯಚಕಿತರಾದರು. ರಾಣಿವಾಸದವರು ಆರ್ತನಾದ ಮಾಡತೊಡಗಿದರು. ಋತ್ವಿಜರು ಸ್ರಕ್ ಸ್ರುವಾದಿ ಪರಿಕರಗಳನ್ನತ್ತಬಿಸುಟು, ಮಹಾರಾಜನನ್ನು ರಕ್ಷಿಸಲು ಬಹುವಾಗಿ ಪ್ರಯತ್ನಪಟ್ಟರು. ಬೆಂಕಿಯಮುಂದೆ ಮಾನವನ ಸಾಹಸ ಗೆಲ್ಲಲಾರದೆಂದು ಸಭೆಯಲ್ಲಿ ತವಕ – ಆತಂಕ ಮೂಡಿತು.

ಅಷ್ಟರಲ್ಲಿ ಯಜ್ಞವೂ, ಯಜ್ಞಪುರುಷನೂ, ಯಜ್ಞಫಲವೂ, ಯಜ್ಞಫಲದಾಯಕನೂ ಆದ ಶ್ರೀ ಮಹಾವಿಷ್ಣುವಿನ ನಳಿದೋಳುಗಳ ಮೇಲೆ ಕಂಗೊಳಿಸುತ್ತಿದ್ದ ಚೋಳರಾಜನನ್ನು ಎಲ್ಲರೂ ಕಂಡರು. ಸಭಿಕರ ಆನಂದಕ್ಕೆ ಪಾರವಿಲ್ಲದಂತಾಯ್ತು. 'ಭಯಕೃದ್ಭಯನಾಶಕ, ಜಗದಾಧಾರಕ ನಮೋನಮಃ' ಎಂದು ಸಹಸ್ರಸಹಸ್ರ ಜನ ಜಯಧ್ವನಿ ಮಾಡಿದರು. ಭಗವದ್ದರ್ಶನದಿಂದ ಪುನೀತರಾದ ಆ ಸಭಿಕರಿಗೆ ಒಂದು ದಿವ್ಯ ಧ್ವನಿ ಕೇಳಬಂತು —

"ವಿಷ್ಣುದಾಸ–ಚೋಳರಾಜ– ಇಬ್ಬರೂ ಇನ್ನು ಮೇಲೆ ಪದ್ಮನಾಭನ ಪರಿಷತ್ಸದಸ್ಯರು – ಪಾರ್ಷದರು ; ಮರ್ತ್ಯಲೋಕದ ಸಂಪರ್ಕ ಅವರಿಗಿಲ್ಲ. ವಿಷ್ಣುದಾಸನ ಹೆಸರು ಪುಣ್ಯಶೀಲ ಚೋಳರಾಜನ ಹೆಸರು ಸುಶೀಲ.'' ★

# ಶ್ರೀ ಕಲಶೇಶ್ವರಸ್ವಾಮಿ

ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕು ಕಳಸದಲ್ಲಿ ಶ್ರೀ ಕಲಶೇಶ್ವರಸ್ವಾಮಿ ದೇವಸ್ಥಾನ ವಿದೆ. ಇದು ಮೊದಲು ಬಾಳೇ ಹೊನ್ನೂರಿಗೆ ಸೇರಿತ್ತು. ಈ ದೇವಸ್ಥಾನವು ಭದ್ರಾನದಿಯ ಬಲತೀರದಲ್ಲಿರುತ್ತೆ. ಇದರ ಸುತ್ತಲೂ ಹಚ್ಚ ಹಸುರಾಗಿ, ಮುಗಿಲನ್ನು ತಾನು ಮುಂದು ನಾನು ಮುಂದು ಎಂದು ಚುಂಬಿಸುವ ರೀತಿಯಲ್ಲಿ ದಟ್ಟವಾದ ಮರಗಿಡಗಳೂ ಅಲ್ಲದೆ ಸುತ್ತಲೂ ಹಸಿರು ಕೋಟೆಯಂತೆ ಆವರಿಸಿಕೊಂಡಿರುವ ಅತ್ಯುನ್ನತವಾದ ಬೆಟ್ಟಗಳೂ ಇವೆ. ಈ ಬೆಟ್ಟಗ ಳಲ್ಲಿ ಪ್ರಮುಖವಾದುವು ಮೇಲಿನ ಬೆಟ್ಟ ಮತ್ತು ಕುದುರೆಮುಖವೆಂಬ ಬೆಟ್ಟಗಳು.

ಈ ದೇವಸ್ಥಾನವು ಅತೀ ಪುರಾತನವಾದುದು. ಇದನ್ನು ಶ್ರುತಬಿಂದು ಎಂಬ ಮಹಾರಾಜನು ಕಟ್ಟಿಸಿದನೆಂಬ ಶಾಸನಗಳು ಕಂಡುಬರುತ್ತವೆ. ಈ ದೊರೆಯು ಯಮುನಾ ನದೀತೀರದಲ್ಲಿ ಇದ್ದಂತಹ ಸುರಸಾ ಎಂಬ ಪಟ್ಟಣದಲ್ಲಿ ಆಳುತ್ತಿದ್ದನು. ಈ ರಾಜನಿಗೆ ಆಗಾಗ್ಗೆ ಕಾಡಿನಲ್ಲಿ ಬೇಟೆಯಾಡುವ ಹವ್ಯಾಸ. ಬೇಟೆಗೆಂದು ತನ್ನ ಪರಿವಾರದೊಡನೆ ಹೋದರೆ ವಾರಗಟ್ಟಲೆ ರಾಜ್ಯದ ಆಡಳಿತ ಭಾರ ದಿಂದ ದೂರವಿದ್ದು, ಹಾಯಾಗಿ ಸಮಯವನ್ನು ಕಳೆಯುತ್ತಿದ್ದನು. ಒಮ್ಮೆ ಶ್ರುತಬಿಂದು ರಾಜನು ತನ್ನ ಪರಿವಾರದೊಂದಿಗೆ ಬೇಟೆಗೆಂದು ಕಾಡಿನಲ್ಲಿ ಹೋಗುತ್ತಾ ಅನೇಕ ಕಾಡು ಮೃಗಗಳನ್ನು, ನೂರಾರು ಆನೆಗಳನ್ನು ಬೇಟೆಯಾಡಿದ. ಬೇಟೆ ಯಿಂದ ಆಯಾಸಗೊಂಡು ಒಂದು ಮರದ ಕೆಳಗೆ ವಿಶ್ರಾಂತಿ ಪಡೆಯಲೆತ್ನಿಸಿದನು. ಇದ್ದಕ್ಕಿದ್ದಂತೆ ಮನಸ್ಸಿಗೆ ವ್ಯಥೆಯಾಯಿತು, 'ನಾನು ಅನೇಕ ಮೂಕಪ್ರಾಣಿಗಳನ್ನು ಕೊಂದಿರುವೆ. ಆ ಪಾಪ ವಿಮುಕ್ತನಾಗಬೇಕು' ಎಂದು ಯೋಚಿಸುತ್ತಿರು ವಾಗ ಮಂತ್ರಿಯು ರಾಜನ ವ್ಯಥೆಯನ್ನು ತಿಳಿದು 'ಇದಕ್ಕೆ ವೇದ ಪರ್ವತಕ್ಕೆ ಹೋಗಿ ಅಲ್ಲಿ ಋಷಿ ಗಳನ್ನು ಕಂಡು ಪರಿಹಾರ ಹುಡುಕೋಣ' ಎಂದ. ಅದರಂತೆ ರಾಜ ವೇದಪರ್ವತಕ್ಕೆ ಬಂದು ಋಷಿಗ ಳನ್ನು ಕಂಡು ತನ್ನ ವ್ಯಥೆಯನ್ನು ತೋಡಿ ಕೊಂಡು ಅದಕ್ಕೆ ಪರಿಹಾರ ಕೇಳಿದನು. ಆಗ ಋಷಿಗಳು, ಶ್ರೀ ಕಲಶ ಕ್ಷೇತ್ರದ ಮಹಿಮೆಯನ್ನು ವಿವರಿಸಿದರು. "ರಾಜ ಕೇಳು, ಅರವತ್ನಾಲ್ಕು ಕ್ಷೇತ್ರಗಳಲ್ಲಿ ಅಗ್ರಪೂಜೆಯನ್ನು ಪಡೆದಿರುವ ಕಲಶ ಪುರಿಯು ತುಂಗಭದ್ರಾನದಿಯ ತೀರದಲ್ಲಿ ಇರುವ ಪುರಾತನ ಕ್ಷೇತ್ರ. ಯೋಜನತ್ರಯ ವಿಸ್ತಾರವುಳ್ಳ ಈ ಕ್ಷೇತ್ರಕ್ಕೆ ಖಾಂಡ್ಯವು ಅಂತರ್ಹಿತ ವಾಗಿರುವುದು. ಕಳಸವು ದಕ್ಷಿಣ ಕಾಶಿ ಎಂದೂ ಖಾಂಡ್ಯವು ದಕ್ಷಿಣಗಯಾ ಎಂದೂ ಪುರಾಣ ಪ್ರಸಿದ್ಧವಾಗಿರುವುವು. ಈ ಕ್ಷೇತ್ರೋತ್ಪತ್ತಿಗೆ ಆಗಸ್ತ್ಯ ಮುನಿಯೇ ಕಾರಣಭೂತನು.

ಮಿತ್ರ, ವರುಣರೆಂಬ ಋಷಿ ಸಹೋದರರಿಬ್ಬರು ಮಿಳಿತರಾಗಿ ಸ್ವೇಚ್ಛಾ ವಿಹಾರ ಮಾಡುತ್ತ ತುಂಗಭದ್ರಾನದಿಯ ದಡಕ್ಕೆ ಬಂದು ಅಲ್ಲಿಯ ಸೌಂದರ್ಯಕ್ಕೆ, ಏಕಾಂತತೆಗೆ ಮಾರುಹೋಗಿ ತಪಸ್ಸು ಮಾಡಲಿಚ್ಛೆಯುಳ್ಳವರಾಗಿ, ಪ್ರತ್ಯೇಕ ಕುಟೀರವನ್ನು ಕಟ್ಟಿಕೊಂಡು ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿರಲು ಇವರ ತಪಸ್ಸಿನಿಂದ ಭೀತಿಗೊಂಡ ದೇವತೆಗಳು ತಪವನ್ನು ಭಂಗಿಸಲು ಊರ್ವಶಿಯನ್ನು ಕಳುಹಿಸಿದರು.

ಈ ಅಪ್ಸರೆಯಿಂದ ಮಿತ್ರಾ, ವರುಣರು ತಪಸ್ಸಿ ನಿಂದ ಬಹಿರ್ಮುಖರಾಗಿ ಮೋಹಪರವಶರಾಗಲು ಇವರ ಹೃತ್ಕಮಲಗಳಲ್ಲಿ ಶುಕ್ಲವು ಪ್ರಸರಿಸು ವಂತಾಗಲು, ಮುಂದಾಗುವ ಕಾರ್ಯಾತಿಶಯ ವನ್ನು ತಿಳಿದಿದ್ದ ಇಂದ್ರಾದ್ಯರು ಮಿತ್ರ, ವರುಣರು ಬಹುದಿನ ತಪಸ್ಸು ಮಾಡಿರುವ ಕಾರಣ ಉತ್ತಮರ ಆವಿರ್ಭಾವ ಆಗಬಹುದೆಂಬ ಆಶೆಯಿಂದ ಈ ಶುಕ್ಲವು ಭೂಪತನವಾಗದಂತೆ ಒಂದು ಕಲಶವನ್ನು ಸ್ಥಾಪನೆ ಮಾಡಿದರು. ಇವರ ಭಾವನೆಯು ವ್ಯರ್ಥವಾಗದೆ ಅಲ್ಲಿಯೇ ಶ್ರೇಷ್ಠರಾದ ಅಗಸ್ತ್ಯರ ಆವಿರ್ಭಾವವಾಯಿತು.

ಅಗಸ್ತ್ಯರು ಶಿವನನ್ನು ಕುರಿತು ಭಕ್ತಿಯಿಂದ ಪೂಜೆಮಾಡುತ್ತಿದ್ದರು. ಭಕ್ತಿಗೆ ಮೆಚ್ಚಿ ಒಮ್ಮೆ ಶಿವನು ಪ್ರತ್ಯಕ್ಷನಾಗಿ, 'ಮಹರ್ಷಿ, ನಿನ್ನ ಭಕ್ತಿಗೆ ಮೆಚ್ಚಿದ್ದೇನೆ, ನಿನಗೆ ಇಷ್ಟಬಂದ ವರವನ್ನು ಕೇಳು' ಎಂದಾಗ, ಮುನಿಯು, 'ಭಗವಂತನೆ, ಜಗನ್ನಾಥ, ನನ್ನ ಜನ್ಮಸ್ಥಳವಾದ ಕಲಶದಲ್ಲಿ ನೀನು ಕಲಶೇಶನೆಂಬ ಹೆಸರಿನಿಂದ ಆವಿರ್ಭವಿಸಿ ಭಕ್ತರಿಗೆ ಕಲ್ಯಾಣವನ್ನು ಉಂಟುಮಾಡುತ್ತ ಕಲ್ಪಾಂತದವರೆವಿಗೂ ಇರಬೇಕು ಇದೇ ನನ್ನ ಕೋರಿಕೆ' ಎಂದಾಗ, ಭಕ್ತವತ್ಸಲನಾದ ಶಂಕರನು ಆ ವರವನ್ನು ಅನುಗ್ರಹಿಸಿ ಅಂತರ್ಧಾನನಾದನು.

ಕಲಶೇಶ ಕ್ಷೇತ್ರದಲ್ಲಿ ಪ್ರತ್ಯಕ್ಷ ಶಂಕರನು ಐಕ್ಯನಾಗಿರುವನೆಂದು ಪ್ರತೀತಿ. ಇದಕ್ಕೆ ಮತ್ತೊಂದು ಕಥೆಯುಂಟು. ಶಂಕರನೊಂದಿಗೆ ಗಿರಿಜೆಯ ವಿವಾಹವು ಅತಿ ವಿಜೃಂಭಣೆಯಿಂದ ವಾರಣಾಸಿಯಲ್ಲಿ ನೆರವೇರಿತ್ತು. ಈ ಗಿರಿಜಾ ಕಲ್ಯಾಣಕ್ಕೆ 14 ಲೋಕ ನಿವಾಸಿಗಳು ಬಹು ಉತ್ಸಾಹದಿಂದ ನೆರೆದಿದ್ದರು. ಇದರಿಂದಾಗಿ ಉತ್ತರ, ದಕ್ಷಿಣವಾಗಿ ಭೂಮಿಯು ನಿಮ್ನೋನ್ನತ ವಾಯಿತು. ಇದನ್ನು ನೋಡಿ ಶಿವನು, ಮೂರ ಲೋಕಕ್ಕೆ ಸಮನಾದ ಭಾರವುಳ್ಳ ಅಗಸ್ತ್ಯ ಮಹರ್ಷಿಯನ್ನೇ ದಕ್ಷಿಣಕ್ಕೆ ಕಳುಹಿಸಿದರೆ ತೂಕವು ಸರಿಯಾಗಿ ಭೂಮಿಯು ಮೊದಲಿನ ಸ್ಥಿತಿಗೆ ಬರುವುದೆಂದು ನುಡಿಯಲು, ನಾರಾಯಣನೇ ಮೊದಲಾದ ದೇವತೆಗಳು ಅಗಸ್ತ್ಯರ ಬಳಿಗೆ ಬಂದು 'ಅಗಸ್ತ್ಯ, ನೀನು ಮಹಾಪ್ರಾಜ್ಞ, ಸರ್ವ ಶಾಸ್ತ್ರಾದೀಶನಾದ ನೀನು ಈ ಲೋಕ ಹಿತಾರ್ಥ ವಾಗಿ ದಕ್ಷಿಣಕ್ಕೆ ಹೋಗಬೇಕೆ'ಂದು ಪ್ರಾರ್ಥಿಸಿ ಕೊಂಡರು. ಆಗ ಮುನಿಗಳು ದುಃಖಾತಿಶಯ ದಿಂದ ಶಂಕರನ ಬಳಿಗೆ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ, "ಹೇ! ದೇವದೇವ, ಲೋಕ ರಕ್ಷಕ, ಶಂಕರ, ಪಾಹಿಮಾಂ, ಪಾಹಿಮಾಂ, ನಿನ್ನ ಈ ವೈಭವದಿಂದ ನಡೆಯುವ ಕಲ್ಯಾಣ ಮಹೋತ್ಸವಕ್ಕೆ ಭೂಮಂಡಲ ನಿವಾಸಿಗಳೆಲ್ಲಾ ಬಂದಿದ್ದಾರೆ; ಅವರೆಲ್ಲಾ ಭಾಗ್ಯಶಾಲಿಗಳು. ಇಂತಹ ಅತ್ಯಾನಂದಕರವಾದ ಮಹೋತ್ಸವ ವನ್ನು ನೋಡದೆ ಹೋಗು ಎಂದು ನನಗೆ ಆಜ್ಞಾಪಿಸಿರುವೆಯಲ್ಲಾ, ಇದು ಸರಿಯೇ? ಇದೆಂತಹ ಅನ್ಯಾಯ. ನಾನು ಮಾಡಿದ ತಪ್ಪಾದರೂ ಏನು?'' ಎಂದು ಅತೀ ವ್ಯಸನದಿಂದ ಬೇಡಿಕೊಂಡನು.

ಆಗ ಶಂಕರನು, 'ಲೋಕ ಕಲ್ಯಾಣಾರ್ಥವಾಗಿ ನಿನ್ನ ಸ್ವಾರ್ಥವನ್ನು ಬಯಸುವುದು ತಪ್ಪು. ನಿತ್ಯ ಕಲ್ಯಾಣವನ್ನು ನಿನಗೆ ನಿನ್ನ ಜನ್ಮಸ್ಥಾನವಾದ ಕಲಶಪುರಿಯಲ್ಲಿಯೇ ಕಲಶೇಶ ಲಿಂಗದಲ್ಲಿ ಐಕ್ಯವಾಗಿ ತೋರಿಸುವೆ. ಆದ್ದರಿಂದ ನೀನು ನಿನ್ನ ಜನ್ಮ ಸ್ಥಾನಕ್ಕೆ ಹೋಗಿ ಈ ಅನಾಹುತವನ್ನು ತಪ್ಪಿಸು' ಎಂದು ಸಮಾಧಾನ ಪಡಿಸಿ ಮುನಿ ಯನ್ನು ಬೀಳ್ಕೊಡುತ್ತಾನೆ. ಅಗಸ್ತ್ಯ ಮುನಿ ತನ್ನ ಮಾರ್ಗದಲ್ಲಿ ಲೋಕಕಂಟಕರಾದ 'ಇಲ್ವಲ, ವಾತಾಪಿ' ಎಂಬ ರಾಕ್ಷಸರನ್ನು ಸಂಹರಿಸಿ ಪತ್ನೀ ಸಮೇತ ಕಲಶಪುರಿಯನ್ನು ಸೇರಿದನು.

ಬ್ರಹ್ಮದೇವರಿಂದ ನಿಶ್ಚಿತವಾದ ಕಾರ್ತಿಕದ ಶುದ ಏಕಾದಶಿ ದಿನ ರಾತ್ರಿ 22 ಘಳಿಗೆಗೆ

ಶ್ರೀ ಬಿ. ಷಣ್ಮುಖಾಚಾರ್ಯ

ಕನ್ಯಾಲಗ್ನದಲ್ಲಿ ಶ್ರೀ ಗಿರಿಜಾ ಕಲ್ಯಾಣವನ್ನು ನಡೆಸತಕ್ಕದ್ದೆಂದು ನಿಶ್ಚಿತವಾಯಿತು. ಅಗಸ್ತ್ಯ ಮುನಿಯ ಅನುಗ್ರಹಾರ್ಥವಾದ ದೇವತೆಗಳಿಂದ ಸ್ಥಾಪಿತವಾದ ಕಲಶದಲ್ಲಿ ಸ್ವಾಮಿಯು ಉದ್ಭವಿಸಿದ ನಿಮಿತ್ತ 'ಕಲಶೇಶ' ಎಂಬ ಹೆಸರು ಬಂದಿತು ಎಂದು ವಾಡಿಕೆ, ಈ ಕಲಶ ಕ್ಷೇತ್ರವು ಅಗಸ್ತ್ಯ ಕ್ಷೇತ್ರವೆಂದು ಪ್ರಸಿದ್ಧವಾಗಿದೆ.

ಈ ರೀತಿ ಕ್ಷೇತ್ರ ಮಹಿಮೆಯನ್ನು ವಿವರಿಸುತ್ತಾ "ನೀನು ಕಲಶ ಕ್ಷೇತ್ರದಲ್ಲಿ ಇರುವ ಈಶ್ವರನನ್ನು ಭಕ್ತಿ, ಶ್ರದ್ಧೆಯಿಂದ ಭಜಿಸಿದರೆ ನಿನ್ನ ಪ್ರಾಣಿಹತ್ಯಾ ದೋಷದಿಂದ ವಿಮುಕ್ತನಾಗುವೆ" ಎಂದು ಋಷಿಗಳು ಶ್ರುತಬಿಂದು ರಾಜನಿಗೆ ತಿಳಿಸಿದರು. ಅದೇ ಪ್ರಕಾರ ಶ್ರುತಬಿಂದು ಮಹಾರಾಜನು ಕಲಶಕ್ಷೇತ್ರಕ್ಕೆ ಬಂದು ಮಹಾ ಶಿವರಾತ್ರಿಯ ದಿವಸ ಈಶ್ವರನನ್ನು ಆರಾಧಿಸಿದನು. ದೇವಸ್ಥಾನಕ್ಕೆ ಸಮೀಪದ ತನ್ನ ಭೂಮಿಗಳನ್ನು ಬಳುವಳಿಯಾಗಿ ಕೊಟ್ಟನು. ಅಲ್ಲದೆ ದೇವರಿಗೆ ಗರ್ಭಗುಡಿಯನ್ನು ಕಟ್ಟಿಸಿದನೆಂದು ಶಾಸನಗಳು ತಿಳಿಸುತ್ತವೆ. ಈ ಕಾರ್ಯದಿಂದಾಗಿ ರಾಜನು ಪಾಪವಿಮುಕ್ತನಾಗಿ ಉದ್ಧಾರವಾದನೆಂದು ಪ್ರತೀತಿ ಇದೆ.

ಈ ಕ್ಷೇತ್ರದ ಸುತ್ತ ಮುತ್ತಲು ಅನೇಕ ಪುಣ್ಯ ತೀರ್ಥಗಳಿವೆ. ಅವುಗಳು ಭದ್ರಾನದಿಯ ಭಾಗವಾಗಿರುತ್ತವೆ. ಇದರಲ್ಲಿ ಪಂಚ ತೀರ್ಥ ಪ್ರಸಿದ್ಧ, ಕೋಶ ತೀರ್ಥ, ರುದ್ರ ತೀರ್ಥ, ಮತ್ತು ನಾಗ ತೀರ್ಥಗಳು ಮುಖ್ಯ.

ಇಂತಹ ಪುಣ್ಯ ಕ್ಷೇತ್ರಕ್ಕೆ ಒಮ್ಮೆ ಹೋಗಿ ಪಂಚ ತೀರ್ಥದಲ್ಲಿ ಮಿಂದು ಸ್ವಾಮಿಯ ಸೇವೆಗೈದರೆ ಪಾಪ ವಿಮುಕ್ತರಾಗಿ, ಶಿವನ ಕೃಪೆಗೆ ಪಾತ್ರರಾಗುವರೆಂದು ಜನ ಭಾವಿಸುತ್ತಾರೆ. ಸಂಶೋಧಕರಿಗೂ ಚರಿತ್ರೆಯ ವಿದ್ಯಾರ್ಥಿಗಳಿಗೂ ಇಲ್ಲಿ ತುಂಬ ಆಕರ್ಷಣೆಗಳಿವೆ.

---

# ಯುವವಾಣಿ

# ಗುರು ಮತ್ತು ಆಚಾರ್ಯ

ಗುರು ಮತ್ತು ಆಚಾರ್ಯ ಎಂಬಿವು ಪರ್ಯಾಯ ಪದಗಳು. ಅರ್ಥ ವಿಶ್ಲೇಷಣೆ ಮಾಡಿದರೆ ಇದು ಸ್ಪಷ್ಟವಾಗುತ್ತದೆ. 'ಗುರು' ಎಂದರೆ ಶಾಸ್ತ್ರಗಳು ಹೇಳುವ ಪ್ರಕಾರ

ಗುಶಬ್ದಸ್ತ್ವಂಧಕಾರಃ ಸ್ಯಾತ್,
ರುಶಬ್ದಸ್ತನ್ನಿವಾರಕಃ ।
ಅಂಧಕಾರ ನಿರೋಧಾಭ್ಯಾಂ
ಗುರುರಿತ್ಯಭಿಧೀಯತೇ ॥

– ಅಂದರೆ 'ಗು' ಶಬ್ದಕ್ಕೆ ಅಂಧಕಾರ ಎಂದರ್ಥ. 'ರು' ಶಬ್ದಕ್ಕೆ ನಿವಾರಕ ಎಂದರ್ಥ. ಒಟ್ಟಿನಲ್ಲಿ ಅಂಧಕಾರ ನಿವಾರಕ ಗುರುವಾಗುತ್ತಾನೆ. ಅಂಧಕಾರವೆಂದರೆ ಬರೀ ಕತ್ತಲು ಎಂದಲ್ಲ 'ಅಂಧಂ ತಮ ಇವಾ ಜ್ಞಾನಂ' ಎಂಬಂತೆ ಇಲ್ಲಿ ಅಂಧಕಾರಕ್ಕೆ ಅಜ್ಞಾನ ಎಂದಾಗುತ್ತದೆ. ಅಜ್ಞಾನ ನಿವರ್ತಕನೇ ಗುರುವಾಗಲರ್ಹನಾಗುವವನು. ಮತ್ತೆ ಆಚಾರ್ಯ ಶಬ್ದನಿರ್ವಚನ ಹೇಗೆಂದರೆ 'ಆಚಿನೋತಿ ಹಿ ಶಾಸ್ತ್ರಾರ್ಥಾನ್' ಎಂದೂ 'ಸ್ವಯ- ಮಾಚರತೇ ಯಸ್ಮಾತ್' ಎಂದೂ, ಗುರು ಮುಖೇನ ಪಡೆದ ಜ್ಞಾನದಿಂದ ಸಕಲ, ಶಾಸ್ತ್ರಗಳನ್ನೂ ಪರಿಶೀಲಿಸಿ ಅದರಂತೆ ತಾನೂ ನಡೆಯುವವನು – ಆಚಾರ್ಯ ಉಚ್ಯತೇ – ಆಚಾರ್ಯನೆನ್ನಲ್ಪಡುತ್ತಾನೆ. ಅಂದರೆ ಬರೀ ಶಾಸ್ತ್ರೋಪದೇಶದಲ್ಲಿ ತೊಡಗದೆ ಉಪದೇಶಿಸಿದಂತೆ ತಾನೂ ಆಚರಿಸುವವನು ಆಚಾರ್ಯನೆನ್ನಲ್ಪಡುವನೆಂದಾಯಿತು. ಅಂದರೆ ಶಾಸ್ತ್ರಜ್ಞಾನವುಳ್ಳವನೂ, ಅನುಷ್ಠಾನಪರನೂ ಆಗಿರುವಾತ ಆಚಾರ್ಯ. ಮತತ್ರಯ ಪ್ರಚಾರಕರಾದ ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ ಇವರಲ್ಲಿ ಅವರ ಗ್ರಂಥಗಳ ಮೂಲಕವೂ ಅವರ ಚರಿತ್ರೆಗಳಮೂಲಕವೂ ಅವರು ಬರೀ ಜ್ಞಾನೋಪದೇಶ ನಿಷ್ಠರಾಗದೇ ಅನುಷ್ಠಾನ ಪರರೂ ಆಗಿದ್ದರೆಂದು ವಿದಿತವಾಗುವುದು. ಇದನ್ನೇ ಶ್ರೀಮಣವಾಳಮಾಮುನಿಗಳು ತಮ್ಮ ಉಪದೇಶ ರತ್ನಮಾಲೈ ಎಂಬ ಪ್ರಬಂಧದಲ್ಲಿ ಜ್ಞಾನ ಮತ್ತು ಅನುಷ್ಠಾನ ಇವುಗಳುಳ್ಳ ಗುರುವನ್ನಾಶ್ರಯಿಸಿದರೆ ಸಾಕು ಅಂತಹವನಿಗೆ ಮೋಕ್ಷ ಕರತಸ್ಸಿದ್ಧ ಎಂದಿದ್ದಾರೆ.

ಸಾಮಾನ್ಯವಾಗಿ ಗುರುಗಳನ್ನು ತ್ರಿಮೂರ್ತಿಸ್ವರೂಪರನ್ನಾಗಿ ಹೇಳುತ್ತಾರೆ. ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರೇವ ಮಹೇಶ್ವರಃ, ಪುನಃ. ಗುರುರೇವ ಪರಬ್ರಹ್ಮ, ಗುರುರೇವ ಪರಾ ಗತಿಃ, ಗುರುರೇವ ಪರಾ ವಿದ್ಯಾ – ಎಂದೂ ಹೇಳುತ್ತಾರೆ. ಗುರು- ವಾದವನು ಪಾಪಕಾರ್ಯಮಗ್ನರಾದ ಚೇತನರನ್ನು ಪರಾತ್ಪರನಾದ ಭಗವಂತನಿಗೆ ಅಭಿಮುಖರನ್ನಾಗಿ ಮಾಡಿ ಉತ್ತಮ ಗತಿಯನ್ನು ಪಡೆಯಲು ಸಹಾಯಕನಾಗುತ್ತಾನೆ. ಗುರುವಿಲ್ಲದ ವಿದ್ಯೆ ವಿದ್ಯೆಯೇ ಅಲ್ಲ. ಸತ್ಯವಿದ್ದರೂ ಸಹಾಯ ಬೇಕು ಎನ್ನುವಂತೆ. ತತ್ತ್ವಜ್ಞಾನವನ್ನು ತಿಳಿಯಲು ಗುರುವಿನ ಸಹಾಯ ಬೇಕೇಬೇಕು. ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ ಎಂದಿದ್ದಾರೆ ದಾಸರಾಯರು.

ಆಚಾರ್ಯರು ತಮ್ಮ ಜ್ಞಾನ ಮತ್ತು ಅನುಷ್ಠಾನಗಳಿಂದ ಆದರ್ಶಜೀವನ ನಡೆಸುತ್ತಾ ಇದು ಒಳ್ಳೆಯದು, ಇದು ಕೆಟ್ಟದ್ದು ಎಂಬ ಸದಸದ್ವಿವೇಕವನ್ನು ಶಿಷ್ಯರಲ್ಲಿ ಮೂಡಿಸಿ, ಅವರೆಲ್ಲಾ ಆಚಾರ್ಯರನ್ನು ಪ್ರಾಮಾಣಿಕವಾಗಿ ಆಶ್ರಯಿಸಿ, ಭಗವಾನ್ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಅನುಗ್ರಹಿಸಿದಂತೆ

ತದ್ವಿದ್ಧಿ ಪ್ರಣಿಪಾತೇನ
ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ
ಜ್ಞಾನಿನಃ ತತ್ತ್ವದರ್ಶಿನಃ ॥

ಎಂಬಂತೆ ಪ್ರಣಿಪಾತ, ಪರಿಪ್ರಶ್ನ, ಸೇವೆಗಳಿಂದ ಆಚಾರ್ಯಾನುಗ್ರಹ ಪಡೆದು ಜ್ಞಾನವನ್ನು ಪಡೆದು ಉಜ್ಜೀವಿಸುವಂತೆ ಮಾಡುತ್ತಾರೆ.

ಶ್ರುತಿ, ಸ್ಮೃತಿ, ಇತಿಹಾಸ ಪುರಾಣಾದಿಗಳಲ್ಲಿ ಆಚಾರ್ಯಾಶ್ರಯ ಅತ್ಯವಶ್ಯಕವೆಂದು ಪ್ರತಿಪಾದಿಸಲ್ಪಟ್ಟಿದೆ. ವೇದದಲ್ಲೂ 'ಆಚಾರ್ಯದೇವೋ ಭವ' ಎಂದೂ, 'ಆಚಾರ್ಯವಾನ್ ಪುರುಷೋ ವೇದ' ಎಂದೂ – ಶಾಸ್ತ್ರಗಳು 'ದೇವಮಿವ ಆಚಾರ್ಯಮುಪಾಸೀತ' ಎಂದೂ ಘೋಷಿಸುತ್ತಿವೆ. 'ಅರ್ಚಾವಿಷ್ಣೌ ಶಿಲಾಧೀಃ– ಗುರುಷು ನರಮತಿಃ' ಎಂಬಂತೆ ಅರ್ಚಾಮೂರ್ತಿಗಳೆಲ್ಲ ಕಲ್ಲು ಎಂಬ ಬುದ್ಧಿ, ಆಚಾರ್ಯರೆಲ್ಲ ಕೇವಲ ಮನುಷ್ಯಮಾತ್ರ ಎಂಬ ಬುದ್ಧಿ ಬರಬಾರದು. ಹಾಗಾದಲ್ಲಿ ಮಾತ್ರ ಮೋಕ್ಷಕರತಸ್ಸಿದ್ಧ ಎನ್ನುತ್ತಾರೆ ಹಿರಿಯರು.

ಪಾಪಿಷ್ಠ ಕ್ಷತ್ರಬಂಧುಶ್ಚ
ಪುಂಡರೀಕಶ್ಚ ಪುಣ್ಯಕೃತ್ ।
ಆಚಾರ್ಯವತ್ತಯಾ ಮುಕ್ತಾ
ತಸ್ಮಾದಾಚಾರ್ಯವಾನ್ ಭವೇತ್ ॥

ಎಂಬ ಶ್ಲೋಕ ಪ್ರಸಿದ್ಧ. ಪಾಪಿಗಳೂ ಆಚಾರ್ಯ ಸಮಾಶ್ರಿತರಾಗಬೇಕೆಂಬುದನ್ನು ಸೂಚಿಸುತ್ತದೆ.

ಸರ್ವೇಶ್ವರನಾದ ಭಗವಂತನೂ ಆಶೆಪಟ್ಟು ತಾನೇ ಆಚಾರ್ಯನಾಗಿಯೂ ಶಿಷ್ಯನಾಗಿಯೂ ಭೂಮಿಯಲ್ಲಿ ನರನಾರಾಯಣ ರೂಪದಿಂದವತರಿಸಿ ಗುರು ಶಿಷ್ಯರಿರಬೇಕಾದ ರೀತಿಯನ್ನು ವ್ಯಕ್ತಪಡಿಸಿದ್ದಾನೆ.

ಶ್ರೀಮದ್ರಾಮಾಯಣದಲ್ಲಿ ಮೊದಲ ಸರ್ಗದ ಮೊದಲ ಶ್ಲೋಕದಲ್ಲಿ ಆಚಾರ್ಯ ಶಿಷ್ಯರ ಆದರ್ಶ ಲಕ್ಷಣಗಳನ್ನು ವಿವೇಚಿಸಿದ್ದಾರೆ.

ತಪಃಸ್ವಾಧ್ಯಾಯನಿರತಂ
ತಪಸ್ವೀ ವಾಗ್ವಿದಾಂ ವರಂ ।

ಶ್ರೀ ವಿ. ಎಸ್.
ರಾಮಾನುಜಾಚಾರ್ಯ

ನಾರದಂ ಪರಿಪಪ್ರಚ್ಛ
ವಾಲ್ಮೀಕಿರ್ಮುನಿಪುಂಗವಮ್ ||

ಈ ಶ್ಲೋಕದಲ್ಲಿ ಪರಮ ಪೂಜ್ಯರಾದ ನಾರದರನ್ನು ಕುರಿತು ತಪಸ್ವಿಯಾದ ವಾಲ್ಮೀಕಿಯು ಪ್ರಶ್ನಿಸಿ ತತ್ತ್ವವನ್ನು ತಿಳಿದುಕೊಂಡನೆಂಬ ಅಂಶವಿದೆ. "ತಪಃ ಸ್ವಾಧ್ಯಾಯ ನಿರತಂ", "ವಾಗ್ವಿದಾಂವರಂ", "ನಾರದಂ" "ಮುನಿಪುಂಗವಂ" ಎಂದು ಆಚಾರ್ಯರಾದ ನಾರದರಿಗೆ ಲಕ್ಷಣ ಹೇಳಲ್ಪಟ್ಟಿದೆ. ತಪಸ್ವೀ, ವಾಲ್ಮೀಕಿಃ ಎಂಬುದು ಶಿಷ್ಯನ ಲಕ್ಷಣ. ತಪಸ್ಸೆಂದರೆ ವ್ರತ ನಿಯಮೋಪವಾಸಾದಿ ಒಳ್ಳೆಯ ಕರ್ಮಗಳೆಂದಾಗಲಿ ಬ್ರಹ್ಮಜ್ಞಾನವೆಂದಾಗಲೀ ಅರ್ಥವಾಗುತ್ತದೆ. ತಪಸ್ಸು ಶಾರೀರಕ, ವಾಚಕ, ಮಾನಸಿಕ ಎಂದು ಮೂರು ವಿಧ. ಗೀತೆಯ 17 ನೇ ಅಧ್ಯಾಯದಲ್ಲಿ 14, 15, 16ನೇ ಶ್ಲೋಕಗಳಲ್ಲಿ ಈ ವಿಷಯವು ವಿಶದವಾಗಿದೆ. ಶಾರೀರಕ ತಪಸ್ಸೆಂದರೆ ದೇವತೆಗಳನ್ನು, ತಿಳಿದವರನ್ನು ಮತ್ತು ಜ್ಞಾನಿಗಳನ್ನು ಪೂಜಿಸುವಿಕೆ, ದೇಹಶುದ್ಧವಾಗಿಟ್ಟುಕೊಳ್ಳುವಿಕೆ, ಶರೀರದ ಪ್ರತಿ ಅಂಗಗಳನ್ನು ಅವುಗಳ ಋಜುಸ್ವಭಾವದಲ್ಲಿಟ್ಟುಕೊಂಡು, ಬ್ರಹ್ಮಚರ್ಯ, ಅಹಿಂಸೆ ಇವುಗಳನ್ನು ಪಾಲಿಸುವಿಕೆ, ವಾಚಿಕ ತಪಸ್ಸಾದರೋ ಮತ್ತೊಬ್ಬರಿಗೆ ನೋವುಂಟುಮಾಡದಂತೆ, ಸತ್ಯವೂ ಪ್ರಿಯವೂ ಹಿತವೂ ಆಗಿರುವಂತೆ ಮಾತನಾಡುವಿಕೆ ಮತ್ತು ವೇದಾಧ್ಯಯನ ನಿರತನಾಗಿ ಭಗವತ್‌ಜ್ಞಾನ ಬೋಧಕವಾದ ಗ್ರಂಥಗಳನ್ನು ಪಠಿಸುವಿಕೆ. ಮಾನಸಿಕ ತಪಸ್ಸೆಂಬುದು ಮನಶ್ಶಾಂತಿ, ಸೌಮ್ಯತೆ ಮೌನ, ಆತ್ಮಸಂಯಮ ಅಥವಾ ಇಂದ್ರಿಯ ನಿಗ್ರಹ, ಚಿತ್ತಶುದ್ಧಿ – ಇವುಗಳನ್ನು ಪಾಲಿಸುವಿಕೆ. ಇಂತಹ ಮೂರು ವಿಧ ಲಕ್ಷಣಗಳಿಂದ ಕೂಡಿದವರಾಗಿ ತಪಸ್ಸಿನಲ್ಲಿ ನಿರತರಾಗಿ, ವೇದಾಧ್ಯಯನ ಪರರಾಗಿ, ವಾಗ್ವೈಭವದಿಂದ ಕೂಡಿರುವ ಮುನಿಶ್ರೇಷ್ಠರಾದ ನಾರದರು ಸರಿಯಾದ ಆಚಾರ್ಯಲಕ್ಷಣವುಳ್ಳವರು. ಮತ್ತೂ ನಾರದಪದದ ಅರ್ಥ ವಿವೇಚಿಸಿದರೆ 'ನರತೀ ತಿನರಃ ಪ್ರೋಕ್ತಃ ಪರಮಾತ್ಮಾ ಸನಾತನಃ' ಎಂಬಂತೆ ನರ ಎಂದು ಪರಮಾತ್ಮನನ್ನು ಹೇಳುತ್ತಾರೆ. ನಾರ ಎಂದರೆ ನರಸಂಬಂಧಿಯಾದ ಅಂದರೆ ಪರಮಾತ್ಮ ಸಂಬಂಧವಾದ ಜ್ಞಾನ, ಇಂತಹ ಜ್ಞಾನವನ್ನು – ದ – ಕೊಡುವವರು ಎಂದು ಭಗವತ್‌ಜ್ಞಾನಪ್ರದರು ಎಂದಾಗುತ್ತದೆ. ಇಂತಹ ಆಚಾರ್ಯರನ್ನು ಪ್ರಶ್ನಿಸಿದ ಶಿಷ್ಯನೂ, ಶಿಷ್ಯಲಕ್ಷಣ ಸಂಪೂರ್ಣನೇ. ಅಂದರೆ ವಾಲ್ಮೀಕಿ ಅದ್ಭುತ ತಪಸ್ಸಿನಿಂದ ಸಿದ್ಧಿ ಪಡೆದವನೇ ಆಗಿದ್ದನು. ಆತನು ಆಚಾರ್ಯರನ್ನು ಪರಿಪಪ್ರಚ್ಛ – ಚೆನ್ನಾಗಿ ಸಂಶಯ ವಿಪರ್ಯಯಗಳು ಇಲ್ಲವಾಗುವಂತೆ ಪರಿಪರಿ ಪ್ರಶ್ನೆಗಳನ್ನು ಕೇಳಿ ತತ್ತ್ವಜ್ಞಾನ ಪಡೆದ. ಗೀತಾಚಾರ್ಯನಾದ ಶ್ರೀಕೃಷ್ಣ ಇದನ್ನೇ ಗೀತೆಯಲ್ಲಿ

ತದ್ವಿದ್ಧಿ ಪ್ರಣಿಪಾತೇನ
ಪರಿಪ್ರಶ್ನೇನ ಸೇವಯಾ
ಉಪದೇಕ್ಷ್ಯಂತಿ ತೇ ಜ್ಞಾನಂ
ಜ್ಞಾನಿನಃ ತತ್ತ್ವದರ್ಶಿನಃ ||

ಎಂದಿದ್ದಾನೆ. ಜ್ಞಾನವನ್ನು ಪಡೆಯಲು ಅರ್ಹನಾದ ಆಚಾರ್ಯರನ್ನು ಸೇವಿಸುತ್ತಾ, ಅವರಲ್ಲಿ ವಿಧೇಯನಾಗಿ ಪರಿಪರಿಯಾದ ಪ್ರಶ್ನೆಗಳನ್ನು ಕೇಳಿ ತತ್ತ್ವಜ್ಞಾನವನ್ನು ಪಡೆಯಬೇಕೆಂದು ಶ್ರೀಕೃಷ್ಣನ ಆಶಯ. ಈ ರಾಮಾಯಣ ಶ್ಲೋಕದಲ್ಲಿ ಆಚಾರ್ಯ

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,
## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ 8–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

ಮತ್ತು ಶಿಷ್ಯರ ಸಮ್ಯಕ್‌ಲಕ್ಷಣ ಚಿತ್ರಿತ ವಾಗಿದೆ.

ಶ್ರೀ ವಿಷ್ಣು ಸಹಸ್ರನಾಮದ 211 ನೇ ನಾಮದಿಂದ ಹಿಡಿದು 219 ನೇ ನಾಮದವರೆಗೆ ಉಕ್ತವಾಗಿರುವ 23 ನೇ ಶ್ಲೋಕವನ್ನು ಆಚಾರ್ಯಲಕ್ಷಣಗಳನ್ನಾಗಿ ಹಿರಿಯರು ಹೇಳಿದ್ದಾರೆ. ಆ ಶ್ಲೋಕ ಹೀಗಿದೆ.

ಗುರುರ್ಗುರುತಮೋ ಧಾಮ
ಸ್ಸತ್ಯಸ್ಸತ್ಯಪರಾಕ್ರಮಃ ।
ನಿಮಿಷೋಽನಿಮಿಷಸ್ಸ್ರಗ್ವೀ
ವಾಚಸ್ಪತಿರುದಾರ ಧೀಃ ॥

ಅಜ್ಞಾನವೆಂಬ ಅಂಧಕಾರವನ್ನು ನೀಗಿಸುವವನು ಗುರು. ಅಂತಹ ಗುರುವು ಸಮಾಜದಲ್ಲಿ ಘನವಾದ ವ್ಯಕ್ತಿಯಾಗಿ ಎಲ್ಲ ವಿದ್ಯೆಗಳಿಗೂ ಆವಾಸಸ್ಥಾನದಂತಿರುವವನು. ಸತ್ಯವಚನ ರೂಪವಾದ ಧರ್ಮ ಬೋಧೆ ಮಾಡುವವನು. ಕಪಟವಿಲ್ಲದ ಸ್ವಭಾವ ಉಳ್ಳವನು. ಹೇಳುವ ಪಾಠದಲ್ಲಿ ನಿಷ್ಕಪಟಿಯಾಗಿ ಶಿಷ್ಯರಿಗೆ ಬೋಧಿಸುವವನು, ವಿದ್ಯಾವಿರೋಧಿಗಳನ್ನು ಉದಾಸೀನದಿಂದ ಕಾಣುವವನು, ವಿದ್ಯೆ ಕಲಿಯಲಾಸಕ್ತರಾದವರಲ್ಲಿ ಸದಾ ಕಣ್ಣು ಮುಚ್ಚದಂತೆ ಅವರ ವಿದ್ಯೆಯ ಕಲಿಕೆಯಲ್ಲಿ ಆಸಕ್ತಿ ಇರುವವನು, ನಾಲ್ಕು ಜನರ ಮಧ್ಯೆ ಹಾರದಂತೆ ಬೆಳಗುವವನು, ವಿದ್ಯೆಯಲ್ಲಿ ಬೃಹಸ್ಪತಿಗೆ ತಕ್ಕ ಬುದ್ಧಿ ಉಳ್ಳವನು, ಹೇಳಿಕೊಡುವ ವಿದ್ಯೆಯಲ್ಲಿ ಯಾವ ಭಾಗವನ್ನೂ ಮುಚ್ಚುಮರೆಯಿಲ್ಲದೆ ಉದಾರ ಬುದ್ಧಿಯಿಂದ ಹೇಳಿಕೊಡುವವನು. ಈ ಶ್ಲೋಕದಲ್ಲಿ ಸದಾಚಾರ್ಯರ ಸಕಲ ಲಕ್ಷಣಗಳೂ ಅತ್ಯಂತ ವಿವರವಾಗಿ ಹೇಳಲ್ಪಟ್ಟಿವೆ.

ಗುರುಶುಶ್ರೂಷಯಾ ವಿದ್ಯಾ – ಎಂಬಂತೆ ಗುರುಶುಶ್ರೂಷೆಯಿಂದ ಯೋಗ್ಯ ವಿದ್ಯೆಯನ್ನು ಪಡೆಯಲವಕಾಶವಿದೆ. ಅದಲ್ಲದೇ ನಮಗರಿವಿಲ್ಲದ ಅನೇಕ ಅಂಶಗಳನ್ನೂ ತತ್ತ್ವಾರ್ಥಗಳನ್ನೂ ಗೂಢಾರ್ಥಗಳನ್ನೂ ತಿಳಿಸುವವರು ಆಚಾರ್ಯರು. ಸ್ವತಃ ತಾನೇ ಗ್ರಂಥಗಳನ್ನು ಓದಿ ಅದರ ಅರ್ಥವನ್ನು ಗ್ರಹಿಸುವ ಮಂದಿ ಅನೇಕರು, ಆಚಾರ್ಯರೇಕೆ ಬೇಕೆಂಬುದು ಇವರ ವಾದ. ವೈದಿಕ ವಿದ್ಯೆಯಾಗಲೀ ಲೌಕಿಕ ವಿದ್ಯೆಯಾಗಲೀ ಅವುಗಳ ಸಾರಾರ್ಥಗಳನ್ನು ಗ್ರಹಿಸಲು ಆಯಾ ವಿದ್ಯೆಗಳನ್ನು ಸಮಗ್ರವಾಗಿ ತಿಳಿದಿರುವವರ ಸಹಾಯವಿರಲೇಬೇಕು. ತಾನೇ ತಿಳಿದುಕೊಂಡುಬಿಡುವೆನೆಂಬ ಅಹಂಕಾರಭಾವದಿಂದ ಕೂಡಿದರೆ ಅಪಾರ್ಥಗಳಿಗವಕಾಶವಾಗುತ್ತದೆ. ಆಧ್ಯಾತ್ಮ ವಿದ್ಯೆಗಂತೂ ಆಚಾರ್ಯರ ಅವಶ್ಯಕತೆ ಹೆಚ್ಚಾಗಿ ಬೇಕಾಗಿದೆ. ಅವರು ನಮಗೂ ಭಗವಂತನಿಗೂ ಇರುವ ಸಂಬಂಧ ಜ್ಞಾನವನ್ನು ಬೋಧಿಸುವವರು. ಪುರಾಣ ಸಮುಚ್ಚಯದಲ್ಲಿ ಆಚಾರ್ಯರ ಸಂಬಂಧ ನಮಗೇಕೆ ಬೇಕು ಎಂಬುದನ್ನು ಒಂದು ಸೊಗಸಾದ ಉಪಮಾನದಿಂದ ಹೇಳಿದ್ದಾರೆ.

ನಾರಾಯಣೋಽಪಿ ವಿಕೃತಿಂ ಯಾತಿ
ಗುರೋಃ ಪ್ರಚ್ಯುತಸ್ಯ ದುರ್ಬುದ್ಧೇಃ ।
ಕಮಲಂ ಜಲಾದಪೇತಂ
ಶೋಷಯತಿ ರವಿಃ ನ ತೋಷಯತಿ ॥

ಗುರುವಿನಿಂದ ಚ್ಯುತನಾದ ದುರ್ಮತಿಯನ್ನು ಕಂಡು ಸಾಕ್ಷಾತ್ ನಾರಾಯಣನೂ ವಿಕೃತಿಯನ್ನು ಹೊಂದುತ್ತಾನೆ. ಹೇಗೆಂದರೆ ನೀರಿನ ಸಂಬಂಧ ಬಿಟ್ಟ ಕಮಲವನ್ನು ಸೂರ್ಯನು ಬಾಡಿಸುತ್ತಾನಲ್ಲದೇ ಅರಳಿಸುವುದಿಲ್ಲ. ಇಲ್ಲಿ ನೀರು – ಆಚಾರ್ಯರು, ಕಮಲ – ಶಿಷ್ಯ, ಸೂರ್ಯ – ಭಗವಂತ. ನೀರಿನ ಸ್ಥಾನದಲ್ಲಿರುವ ಆಚಾರ್ಯರ ಅಡಿದಾವರೆಗಳಲ್ಲಿದ್ದಂತೆಯೇ ಸವಿತೃ ಮಂಡಲ ಮಧ್ಯವರ್ತಿಯಾದ ಭಗವಂತನಾದ ಶ್ರೀಮನ್ನಾರಾಯಣನೆಂಬ ಸೂರ್ಯನ ಕೈಂಕರ್ಯಕ್ಕಣಿಯಾದರೆ, ಜೀವನೆಂಬ ಕಮಲದ ವಿಕಾಸವಾಗಿ ಅಂದರೆ ಆತ್ಮ ಸ್ವರೂಪ ವಿಕಾಸವಾಗಿ, ಸ್ವರೂಪ ಜ್ಞಾನ ಸಿದ್ಧಿಸಿ ಮೋಕ್ಷಹೊಂದಲು ಯೋಗ್ಯನಾಗುತ್ತಾನೆ.

ಪ್ರಾಚೀನ ಕಾಲದಲ್ಲಿ ಶಿಷ್ಯನಾದವನು, ಗುರುಕುಲವಾಸ ಮಾಡುತ್ತಾ ಗುರುಶುಶ್ರೂಷೆಯಿಂದ ವಿದ್ಯೆಯನ್ನು ಶ್ರದ್ಧೆಯಿಂದ ಕಲಿತು ಅನಂತರ ಜೀವನದಲ್ಲಿ ಅನುಷ್ಠಾನದಲ್ಲಿಟ್ಟುಕೊಳ್ಳುವ ಅನೇಕ ಅಂಶಗಳನ್ನು ಆಚಾರ್ಯರಿಂದ ತಿಳಿದು, ತನ್ನ ಜೀವನ ಸಾರ್ಥಕ ಪಡಿಸಿಕೊಳ್ಳುತ್ತಿದ್ದ. ಆಚಾರ್ಯರಾದವರು ಶಿಷ್ಯನು ಪೂರ್ಣ ವಿದ್ಯಾವಂತ

# ಸಪ್ತಗಿರಿ

**ಬರಹಗಾರರಿಗೆ ಸೂಚನೆ:**

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ನಾದಾಗ, ಈಗಿನಕಾಲದ ಪದವೀದಾನ ಸಮಾರಂಭದಂತೆ, ಒಂದು ಸಮಾರಂಭದಲ್ಲಿ ತನ್ನ ಶಿಷ್ಯನಿಗೆ ಯೋಗ್ಯ ಅನುಶಾಸನ ಮಾಡುತ್ತಿದ್ದರೆಂಬ ಅಂಶ ನಮಗೆ ತೈತ್ತಿರೀಯೋಪನಿಷತ್–ಶಿಕ್ಷಾವಲ್ಲಿ 11–2 ರಿಂದ 11–4 ರ ಭಾಗದಲ್ಲಿ ಉದ್ಬೋಧಿಸಲ್ಪಟ್ಟಿದೆ.

"ವೇದಮನೂಚ್ಯಾಚಾರ್ಯೋಃ
ಅಂತೇವಾಸಿನ ಮನುಶಾಸ್ತಿ"

ಎಂದು ಪ್ರಾರಂಭವಾಗಿ

"ಏಷ ಆದೇಶಃ |
ಏಷ ಉಪದೇಶಃ |
ಏಷಾ ವೇದೋಪನಿಷತ್ |
ಏತ ದನುಶಾಸನಂ |
ಏವ ಮುಪಾಸಿತವ್ಯಂ |
ಏವಮು ಚೈತದುಪಾಸ್ಯಂ"—

ಎಂದು ಅಂತ್ಯವಾಗುವ ಋಕ್ಕುಗಳಲ್ಲಿ ಚೆನ್ನಾಗಿ ಸ್ಪಷ್ಟಪಡಿಸಿದ್ದಾರೆ. ಅದರಲ್ಲಿ ಉಕ್ತವಾಗಿರುವ ಅಂಶಗಳು :—

ವೇದಾಧ್ಯಯನ ಪೂರ್ತಿ ಆದಮೇಲೆ ಶಿಷ್ಯನನ್ನು ಕುರಿತು ಆಚಾರ್ಯರು ಹೇಳುವ ಮಾತುಗಳು ಮನನಾರ್ಹ. ಆಗಿನ ಋಷಿಗಳಾದ ಆಚಾರ್ಯರು ಶಿಷ್ಯರನ್ನು ಕುರಿತು 'ಸತ್ಯವನ್ನು ಹೇಳು, ಧರ್ಮವನ್ನು ಮಾಡು, ಅಧ್ಯಯನವನ್ನು ಬಿಡಿದಿರು ಶರೀರಂ ವಸ್ತುವಿಜ್ಞಾನಂ ಎಂಬಂತೆ ಎಲ್ಲವನ್ನು ಆರ್ಜಿಸಿ ಗೃಹಸ್ಥಾಶ್ರಮಕ್ಕೆ ಯೋಗ್ಯನಾಗು, ಸತ್ಯಮಾರ್ಗದಿಂದ ತಪ್ಪಿ ನಡೆಯದಿರು, ಧರ್ಮವನ್ನು ಬಿಟ್ಟುಹೋಗದಿರು, ದೇವ ಪಿತೃ ಕಾರ್ಯಗಳಲ್ಲಿ ಎಚ್ಚರಿಕೆಯಿಂದಿರು, ತಾಯಿಯೇ ದೇವರು, ತಂದೆಯು ದೇವರು, ಆಚಾರ್ಯರು ದೇವರು, ಅತಿಥಿಗಳು ದೇವರು, ಸತ್‌ಕಾರ್ಯಗಳಾವುದಿವೆಯೋ ಅವುಗಳನ್ನು ಸೇವಿಸು, ಇತರ ಅಸತ್‌ಕಾರ್ಯಗಳನ್ನು ಬಿಡು, ಕೊಡುವುದಲ್ಲಿ ಶ್ರದ್ಧೆಯಿಂದ ಕೊಡು, ಅಶ್ರದ್ಧೆ ಬೇಡ, ನೀನು ಮಾಡುವ ಕಾರ್ಯಗಳಲ್ಲಿ ಏನಾದರೂ ಸಂದೇಹ ಬಂದರೆ, ತಿಳಿದಂತಹವರ ಬಳಿ ಯುಕ್ತಾಯುಕ್ತಗಳನ್ನು ಕೇಳಿ ತಿಳಿದುಕೋ... ಅವರು ಹೇಗೆ ವರ್ತಿಸುವರೋ, ಹಾಗೆಯೇ ನೀನೂ ವರ್ತಿಸು ... ಇದುಆದೇಶ–ಇದು ಉಪದೇಶ ಇದೇ ವೇದಾರ್ಥ–ಇದು ನಮ್ಮ ಆಜ್ಞೆ–ಹೀಗೆಯೇ ಉಪಾಸಿಸು' ಇತ್ಯಾದಿ. ಇದು ಪ್ರಾಚೀನ ಗುರುಕುಲವಾಸ. ಅಲ್ಲಿ ವಿದ್ಯಾವ್ಯಾಸಂಗ ಪಡೆದು ಸದ್ಗೃಹಸ್ಥರಾಗಿ, ಲೌಕಿಕ ವೈದಿಕ ಪ್ರಕ್ರಿಯಗಳಲ್ಲಿ ಶ್ರದ್ಧೆ ವಹಿಸಿ ಆಚಾರ್ಯಾನುಜ್ಞೆಯಂತೆ ನಡೆಯುತ್ತಾ ಜೀವನ ಸಾರ್ಥಕಗೊಳಿಸಿಕೊಳ್ಳುತ್ತಿದ್ದರು. ★

---

(12ನೇ ಪುಟದಿಂದ)

ಒಂದನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗಿನ ಕಾಲವಧಿಯಲ್ಲಿ ಶ್ರೀಕೃಷ್ಣನ ಮೊದಲನೆಯ ದೇವಾಲಯವನ್ನು ಕಟ್ಟಿಸಿರಬಹುದೆಂದು ಅಂದಾಜು ಮಾಡಲಾಗುತ್ತಿದೆ. ಅಲ್ಲದೆ ಇತ್ತೀಚೆಗೆ ದೊರೆತ ಅವಶೇಷಗಳಿಂದಾಗಿ ದ್ವಾರಕಾನಗರದ ಪ್ರಾಚೀನತೆಯನ್ನು ಮಹಾಭಾರತದ ಕಾಲದವರೆಗೆ ಕೊಂಡೊಯ್ಯಬಹುದಾಗಿದೆ. ಹಾಗೆಯೇ ಬೇಟ್‌ದ್ವಾರಕಾ ಹಾಗೂ ಪ್ರಭಾಸದಲ್ಲಿ ನಡೆಸಿದ ಉತ್ಖನನಗಳಿಂದಾಗಿ ಕ್ರಿ. ಪೂ. ಸಾವಿರದ ಒಂಬೈನೂರರಿಂದ (1900) ಮುಂದಿನ ಇತಿಹಾಸದ ಮೇಲೆ ನಾವು ಬೆಳಕನ್ನು ಕಾಣುವಂತಾಗುತ್ತದೆ. ಹರಪ್ಪ ಸಂಸ್ಕೃತಿಯನ್ನು ಹೋಲುವ ಕೆಂಪುಪಾತ್ರೆಗಳು ಗುಜರಾಥದ ಅವಂತಿ, ಮಾಳವ ಇವುಗಳಲ್ಲಷ್ಟೇ ಅಲ್ಲ, ಕುರುಕ್ಷೇತ್ರದ ಭಾಗದಲ್ಲಿಯೂ ಸಹ ದೊರಿತಿದೆ. ಇಂಥ ಪಾತ್ರೆಗಳನ್ನು ಬಳಸುತ್ತಿದ್ದ ಜನ ನಾಗರಿಕತೆಯಲ್ಲಿ ಅತ್ಯಂತ ಮುಂದುವರಿದವರಾಗಿದ್ದರು. ಅಲ್ಲದೆ ಈ ಪಾತ್ರೆಗಳ ಮೇಲೆ ಸಾಂಕೇತಿಕರೂಪದಲ್ಲಿ ಬರೆಯಲ್ಪಟ್ಟ ಕೃತಿಗಳಿಂದ ಅವರು ಭಾರತೀಯ ಆರ್ಯಭಾಷೆಯನ್ನು ಚೆನ್ನಾಗಿ ಬಲ್ಲವರಾಗಿದ್ದರು. ಅಷ್ಟೇ ಅಲ್ಲದೆ ಅದನ್ನೇ ಮಾತನಾಡುತ್ತಿದ್ದರು ಎಂದು ತರ್ಕಿಸಬಹುದಾಗಿದೆ. ಸಿಂಧೂನದಿಯ ಸಂಸ್ಕೃತಿಯು ವೇದಕಾಲಕ್ಕಿಂತ ಪೂರ್ವದ್ದಾಗಿದೆ ಎಂದು ಹೇಳಿದಲ್ಲಿ ಹರಪ್ಪ ಹಾಗೂ ಮೊಹೆಂಜೋದಾರೋ ಇವುಗಳ ಸಂಸ್ಕೃತಿಯು ವೈದಿಕ ಯುಗದ ಪೂರ್ವ ಕಾಲದ್ದಾಗಿರಬಹುದೆಂದು ಭಾವಿಸಬಹುದಾಗಿದೆ.

ಪ್ರಪಂಚದ ಎಲ್ಲ ನಾಗರಿಕತೆಗಳಲ್ಲಿ ಸಿಂಧೂ ನಾಗರಿಕತೆಯು ಅತ್ಯಂತ ಹಳೆಯವುಗಳಲ್ಲಿ ಒಂದು ಎಂದು ತಜ್ಞರು ಅಭಿಪ್ರಾಯಪಡುತ್ತಾರೆ. ಮಧ್ಯ ಏಷ್ಯಾದಿಂದ ಮಧ್ಯ ಭಾರತದವರೆಗೆ ಇವರು ಏಕರೂಪದ ಸಾಮ್ರಾಜ್ಯವನ್ನು ಮಾಡಿದ್ದರಿಂದ ಅನಂತರದಲ್ಲಿ ಕಾಣಸಿಗುವ ಎಲ್ಲ ನಾಗರಿಕತೆಗಳಿಗೆ ಇದು ಮಾತೃಸ್ಥಾನವಾಗಿ ತೋರುತ್ತದೆ. ಭಾರತದ ಪ್ರಾಚ್ಯವಸ್ತು ಸಂಶೋಧನಾ ಕ್ಷೇತ್ರದಲ್ಲಿ ಮೊಹೆಂಜೋದಾರೋ, ಹರಪ್ಪಗಳ ಸಂಶೋಧನೆ ಎಷ್ಟು ಮಹತ್ವದ ಅಂಶವೆಂದೆನಿಸುವುದೋ ಅದರಷ್ಟೇ ಮಹತ್ವಪೂರಿತವಾದ ಇನ್ನೊಂದು ಅಂಶವೆಂದರೆ ಲೋಥಲ್‌ನಗರದ ಭೂಶೋಧನೆಯ ಕಾರ್ಯ. ಸಿಂಧೂನದಿ ನಾಗರಿಕತೆಯನ್ನು ಗುರುತಿಸುವಲ್ಲಿ ಲೋಥಲ್ ಅತ್ಯಂತ ಮಹತ್ವಪೂರಿತವಾದ ಒಂದು ಘಟ್ಟ ಎಂಬ ಮಾತನ್ನು ಸಿದ್ಧಪಡಿಸಿ ತೋರಿಸಿದವರು ಕನ್ನಡನಾಡಿನವರಾದ ಡಾಕ್ಟರ್. ಎಸ್.ಆರ್.ರಾವ್ ಇವರು; ಇವರ ಪ್ರಯತ್ನದಿಂದಾಗಿ ಶ್ರೀಕೃಷ್ಣನು ಪೌರಾಣಿಕ ವ್ಯಕ್ತಿಮಾತ್ರವಲ್ಲ. ಆತನು ಇತಿಹಾಸ ಪುರುಷನೂ ಆಗಿದ್ದಾನೆ ಎಂಬ ಮಾತನ್ನು ಇತ್ತೀಚೆಗೆ ನಡೆದ ಉತ್‌ಖನನಗಳಿಂದಾಗಿ ರಾಯರು ಸ್ಪಷ್ಟವಾಗಿ ಎತ್ತಿತೋರಿಸಿದ್ದಾರೆ.

1977 ರಲ್ಲಿ ನೆಹರೂ ಫೆಲೋಶಿಪ್ ಪಡೆದ ಎಸ್. ಆರ್. ರಾವ್ ಇತ್ತೀಚೆಗೆ ಅವರು ಸಮುದ್ರದಾಳದಲ್ಲಿಯ ಪ್ರಾಚ್ಯ ವಸ್ತು ಸಂಶೋಧನಾ ವ್ಯಾಸಂಗವನ್ನು ಪ್ರಾರಂಭಿಸಿದ್ದು, ಮುಳುಗಿಹೋಗಿರುವ ಶ್ರೀ ಕೃಷ್ಣನ ಕಾಲದ ದ್ವಾರಕಾನಗರದ ಅವಶೇಷಗಳನ್ನು ಗುರುತಿಸಲು ಪ್ರಯತ್ನಗಳನ್ನು ನಡೆಸಿದ್ದಾರೆ.

ಓಖಾಮಂಡಲದಲ್ಲಿರುವ ದ್ವಾರಕಾ ಕ್ಷೇತ್ರಕ್ಕೂ ಕನ್ನಡನಾಡಿಗೂ ಅವಿಸ್ಮರಣೀಯವಾದ ಆಧ್ಯಾತ್ಮಿಕ ನಂಟು ಬೆಳೆದು ಕೊಂಡು ಬಂದಿದೆ. ನಮ್ಮನಾಡಿನ ಉಡುಪಿ ಕ್ಷೇತ್ರದಲ್ಲಿರುವ ಶ್ರೀಕೃಷ್ಣನ ವಿಗ್ರಹವು ಆಚಾರ್ಯಮಧ್ವರಕಾಲದಲ್ಲಿ ಓಖಾಮಂಡಲದಿಂದ ಪ್ರಯಾಣಮಾಡುತ್ತಿದ್ದ ಒಂದು ಹಡಗಿನಲ್ಲಿ ಬಂದಿತೆಂದೂ, ಆ ಹಡಗು ಬಿರುಗಾಳಿಗೆ ಸಿಕ್ಕು ತತ್ತರಿಸುತ್ತಿದ್ದಾಗ ಪ್ರಾಣಾಪಾಯದಲ್ಲಿದ್ದ ಆ ಹಡಗಿನಲ್ಲಿ ಪ್ರಯಾಣಮಾಡುತ್ತಿದ್ದವರನ್ನೆಲ್ಲಾ ಮಧ್ವರು ತಮ್ಮ ತಪೋಬಲದಿಂದ ಕಾಪಾಡಿದರೆಂದೂ ಪ್ರತಿಫಲವಾಗಿ ಆ ನೌಕೆಯ ಮಾಲೀಕನು ಗೋಪೀಚಂದನದಲ್ಲಿ ಹುದುಗಿದ್ದ ಶ್ರೀಕೃಷ್ಣನ ವಿಗ್ರಹವನ್ನು ಆಚಾರ್ಯರಿಗೆ ಒಪ್ಪಿಸಿದನೆಂದೂ ಅದನ್ನು ಅವರು ಪಾಜಕ ಕ್ಷೇತ್ರದಲ್ಲಿ ಪ್ರತಿಷ್ಠಾಪಿಸಿದರೆಂದೂ, ಕಾಲಾಂತರದಲ್ಲಿ ಅದನ್ನು ಶ್ರೀಕೃಷ್ಣನ ಉಡುಪಿ ಕ್ಷೇತ್ರವೆಂದು ಕರೆಯುವಂತಾಯಿತೆಂಬುದೂ ಐತಿಹಾಸಿಕವಾಗಿದೆ. ★

# ಭಕ್ತಿ ಮಾರ್ಗ

**ಶ್ರೀ ಕೆ. ಕೇಶವಮೂರ್ತಿ**

ಭಕ್ತಿಯನ್ನು ಶಾಸ್ತ್ರವಾಗಿ ಕೊಟ್ಟವರು ನಾರದರು. ಬ್ರಹ್ಮ ಮಾನಸ ಪುತ್ರರೂ, ದೇವರ್ಷಿಗಳೂ ಆದ ಇವರು ಎಲ್ಲ ಲೋಕಗಳಲ್ಲಿ ಭಕ್ತಿಯನ್ನು ಹರಡಿದ ಮಹಾನುಭಾವರು. ವೇದವೇದಾಂತ ಶಾಸ್ತ್ರ ಜ್ಞಾನಗಳ ಹೊರೆಯಿಂದ ಅಶಾಂತರಾಗಿದ್ದ ಇವರು ಸನತ್ಕುಮಾರ ಗುರು ಕೃಪೆಯಿಂದ ಆತ್ಮತತ್ತ್ವವನ್ನು ತಿಳಿದು ಪರಮಾತ್ಮನನ್ನು ಸಾಕಾರವಾಗಿಯೂ, ನಿರಾಕಾರವಾಗಿಯೂ ಸಾಕ್ಷಾತ್ಕರಿಸಿಕೊಂಡವರು. ಅಷ್ಟಾದಶ ಪುರಾಣಗಳನ್ನು ರಚಿಸಿದ ವೇದವ್ಯಾಸರಿಗೆ ಚಿತ್ತಶಾಂತಿ ಲಭಿಸದೆ, ಆ ಶಾಂತಿಗಾಗಿ ರಚಿಸಿದ ಮಹಾಪುರಾಣವೇ 'ಶ್ರೀಮದ್ಭಾಗವತ'. ಇದು ಭಕ್ತಿಯ ಅಭಿವ್ಯಕ್ತಿಯ ಮಹಾಕಾವ್ಯ ಹಾದು.

ಜ್ಞಾನದ ದಾರಿ ಎಲ್ಲರಿಗೂ ಸುಗಮವಲ್ಲ.

ಖಡ್ಗಧಾರಾ ಪಥೇನೇವ
ಸುಭಟಾನಾಂ ಮನೋರಥಃ ।

ಎಂಬಂತೆ ಇದು ಕತ್ತಿಯ ಮೊನೆಯ ಮೇಲೆ ನಡೆದಂತೆ. ಧೀರಯೋಧರು ಮಾತ್ರ ಈ ಸಾಹಸವನ್ನು ಕೈಕೊಳ್ಳಬಹುದು. ಬಹುಶ್ರುತ ಜ್ಞಾನ ಇದಕ್ಕೆ ಅತ್ಯಾವಶ್ಯಕ. ಆದುದರಿಂದ ಜ್ಞಾನಯೋಗವು ಜ್ಞಾನಿಗಳ ಪಾಲು. ಭಕ್ತಿಮಾರ್ಗವಾದರೋ ಸರ್ವಸಾಮಾನ್ಯರೂ ಸುಲಭವಾಗಿ ಅನುಸರಿಸುವಂತಹುದು. ಮಾರ್ಗವು ಸುಲಭವಾಗಿರುವುದೇ ಅಲ್ಲದೆ ಮೋಕ್ಷಪ್ರಾಪ್ತಿಗೆ ಇದಕ್ಕಿಂತಲೂ ಶ್ರೇಷ್ಠವಾದ ಅನ್ಯಮಾರ್ಗವಿಲ್ಲವೆಂಬುದನ್ನು ಶ್ರೀ ಶಂಕರ ಭಗವತ್ಪಾದರು ;

ಮೋಕ್ಷ ಕಾರಣ ಸಾಮಗ್ರ್ಯಾಂ
ಭಕ್ತಿರೇವ ಗರೀಯಸೀ ।

–ಎಂದುಹೇಳಿದ್ದಾರೆ.

'ಭಕ್ತಿಯೋಗ'ವು ಗೀತಾ ಜ್ಞಾನದ ಅಮೃತ ಫಲವಾಗಿರುತ್ತದೆ. ಭಕ್ತಿಯೇ ಗೀತೆಯ ಹೃದಯವಾಗಿದೆ. ವಿವಿಧವಾದ ಸಾಧನೆಗಳ ವಿಮರ್ಶೆಯಿಂದ, ಭಕ್ತಿಯಿಂದ ಪರಿಪಕ್ವವಾಗದ ಆಚರಣೆಗಳು ಅಪೂರ್ಣವೆಂಬ ತತ್ತ್ವಕ್ಕೆ ಬರಬಹುದು. ವಿರಾಡ್ರೂಪದ ದರ್ಶನದ ಕೊನೆಯಲ್ಲಿ ಈ ದರ್ಶನದ ಸಾಧನೆಯನ್ನು ವಿವರಿಸುತ್ತಾ ಶ್ರೀಕೃಷ್ಣನು, ದೇವ ದುರ್ಲಭವಾದ ಈ ರೂಪವನ್ನು ವೇದಗಳಿಂದಾಗಲೀ, ತಪಸ್ಸಿನಿಂದಾಗಲೀ, ದಾನದಿಂದಾಗಲೀ, ಹೋಮದಿಂದಾಗಲೀ ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವಿಲ್ಲವೆಂಬುದಾಗಿ ಸ್ವಯಂ ತಿಳಿಸಿರುತ್ತಾನೆ.

ನಾಹಂ ವೇದೈರ್ನ ತಪಸಾ
ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ
ದೃಷ್ಟವಾನಸಿ ಮಾಂ ಯಥಾ ॥

ಅನನ್ಯ ಭಕ್ತಿಯೊಂದೇ ಇದರ ಏಕಮಾತ್ರ ಸಾಧನವಾಗಿರುತ್ತದೆ. ಇದರ ಮೂಲಕವೇ ಜೀವನು ಪರಮಾತ್ಮನನ್ನು ಪ್ರತ್ಯಕ್ಷವಾಗಿ ನೋಡಬಹುದು, ತತ್ತ್ವತಃ ತಿಳಿಯಬಹುದು, ಪರಮಾತ್ಮನನ್ನು ಪ್ರವೇಶಿಸ

ನ ಯುಜ್ಯಮಾನಯಾ ಭಕ್ತ್ಯಾ
ಭಗವತ್ಯಖಿಲಾತ್ಮನಿ ।
ಸದೃಶೋಽಸ್ತಿ ಶಿವಃ ಪಂಥಾ
ಯೋಗಿನಾಂ ಬ್ರಹ್ಮಸಿದ್ಧಯೇ ॥

(ಅಖಿಲಾತ್ಮ ಸ್ವರೂಪನಾದ ಭಗವಂತನಲ್ಲಿಡುವ ಭಕ್ತಿಗಿಂತಲೂ ಮಿಗಿಲಾದ ಮಂಗಳಕರ ಮಾರ್ಗವು ಯೋಗಿಗಳಿಗೆ ಬ್ರಹ್ಮಪ್ರಾಪ್ತಿಯ ವಿಷಯದಲ್ಲಿ ಇರಲಾರದು) 'ಪ್ರೀತಿ' ಎಂಬ ಪದವು ಎಲ್ಲರಿಗೂ ಚಿರಪರಿಚಿತವಾದುದು.

ಪ್ರೇಮಪೂರ್ವಕಮನುಧ್ಯಾನಂ
ಭಕ್ತಿರಿತ್ಯಭಿಧೀಯತೇ

ಎಂದು ಹೇಳಲಾಗಿದೆ. ಎಂದರೆ ಪ್ರೇಮಪೂರ್ವಕವಾಗಿ ಭಗವಂತನನ್ನು ಅನುಚಿಂತನಗೈಯುವುದೇ ಭಕ್ತಿ. ನಾರದ ಭಕ್ತಿ ಸೂತ್ರದಲ್ಲಿ,

"ಸಾ ತಸ್ಮಿನ್ ಪರಮ ಪ್ರೇಮರೂಪಾ।" ಎಂದಿದೆ. ಭಕ್ತಿಯೆಂದರೆ ಪರಮಾತ್ಮನಲ್ಲಿರುವ 'ಪ್ರೀತಿ' ಎಂದರ್ಥ.

ಅನೂಕೂಲ ಪ್ರತಿಕೂಲ ಪರಿಸ್ಥಿತಿಗಳಲ್ಲಿ, ಸುಖ-ದುಃಖಗಳಲ್ಲಿ ಮನಸ್ಸು ಸಹಜವಾಗಿ ನಿರಂತರವಾಗಿ ಭಗವಂತನೆಡೆಗೆ ಹರಿಯುತ್ತಿದ್ದರೆ ಅದನ್ನು 'ಭಕ್ತಿ' ಎನ್ನುತ್ತಾರೆ. ಚಿತ್ತದ ಎಲ್ಲ ವೃತ್ತಿಗಳೂ ಭಗವದಭಿಮುಖವಾಗಿ ಹರಿದರೆ ಅದು 'ಭಕ್ತಿ' ಎನ್ನಿಸುತ್ತದೆ. ಭಗವಂತನ ಸೃಷ್ಟಿಯ ಸೌಂದರ್ಯವನ್ನು ಕಂಡು ಕೃತಾರ್ಥನಾದವನ ಹೃದಯಾಂತರಾಳದಿಂದ ಮೂಡಿ ಬರುವುದೇ 'ಭಕ್ತಿ'.

ಹೀಗೆ ಭಕ್ತಿಗೆ ಎಷ್ಟು ಪರಿಭಾಷೆಗಳನ್ನು ಕೊಟ್ಟರೂ ಎಲ್ಲವೂ ಒಂದೇ ಅರ್ಥವನ್ನು ಹೊಂದಿದೆ. ಸದಾಕಾಲವೂ ಭಗವಂತನ ನಾಮ, ಗುಣ, ರೂಪ, ಲೀಲೆ ಸೌಂದರ್ಯ ಮತ್ತು ಮಾಧುರ್ಯಗಳನ್ನು ಚಿಂತನೆ ಮಾಡುವವನೇ 'ಭಕ್ತ'. ಪರಮಾತ್ಮನೆಡೆಗೆ ನಮ್ಮನ್ನು ಕೊಂಡೊಯ್ಯುವ ಮಾರ್ಗವನ್ನು 'ಭಕ್ತಿಪಥ' ಎಂದು ಹೇಳುತ್ತಾರೆ ಭಕ್ತಿಯಿಂದ ಲಭಿಸುವ ಪರಮ ಸಿದ್ಧಿಯನ್ನು ಸಾಧನೆಯ ಪಥದಿಂದ ಬೇರ್ಪಡಿಸಿ ತಿಳಿಯ ಹೇಳಲು ಭಕ್ತಿಯನ್ನು ಎರಡು ವಿಧವಾಗಿ ನಿರ್ವಚಿಸಿದ್ದಾರೆ. ಮೊದಲನೆಯದು 'ಗೌಣೀ ಭಕ್ತಿ', ಎರಡನೆಯದು 'ಪ್ರೇಮ ಭಕ್ತಿ' ಅಥವಾ 'ಪರಾಭಕ್ತಿ'.

ಬಾಹ್ಯ ಸಾಧನಗಳ ಆಲಂಬನದಿಂದ ಪರಾಭಕ್ತಿಯನ್ನು ಪಡೆಯುವುದಕ್ಕೆ ಮೊದಲು ಅನುಷ್ಠಿಸಬೇಕಾದುದು ಗೌಣೀ ಭಕ್ತಿ. ಸಾಧನೆಯು ಪರಾಕಾಷ್ಠೆಯನ್ನು ತಲುಪಿದ ನಂತರ ಅಂತರ್ಯದ ಆಳದಿಂದ ತಾನೇ ತಾನಾಗಿ ಧುಮ್ಮಿಕ್ಕುವ ಭಕ್ತಿಯೇ 'ಪ್ರೇಮ ಭಕ್ತಿ'.

ಭಕ್ತಿಗೆ ವೇದೋಪನಿಷತ್ತುಗಳೇ ಆಕರ. ಅಲ್ಲಿ ಬೀಜಪ್ರಾಯವಾಗಿದ್ದ ಭಕ್ತಿಯು ಭಗವದ್ಗೀತೆಯಲ್ಲಿ 'ಭಕ್ತಿಯೋಗ'ವಾಗಿಯೂ ಭಾಗವತದಲ್ಲಿ 'ಭಕ್ತಿಶಾಸ್ತ್ರ'ವಾಗಿಯೂ ಬೆಳೆಯಿತು.

ಬಹುದು. ಪರಮಾತ್ಮನೊಡನೆ ಐಕ್ಯ ಭಾವವನ್ನು ಹೊಂದಬಹುದು.

ಮತ್ಕರ್ಮಕೃನ್ಮತ್ಪರಮೋ
ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು
ಯಃ ಸ ಮಾಮೇತಿ ಪಾಂಡವ ॥

ಯಜ್ಞ, ದಾನ, ತಪಸ್ಸು, ಇತ್ಯಾದಿ ಮಾಡ ಬೇಕಾದ ಸಮಸ್ತ ಕರ್ಮಗಳನ್ನು ಭಗವಂತನದೆಂದು ತಿಳಿಯುವ ; ಪರಮಾತ್ಮ ನೊಬ್ಬನೇ ಶ್ರೇಷ್ಠನಾದ ಆಶ್ರಯನೆಂದು ನಂಬಿ, ಅವನ ಪ್ರಾಪ್ತಿಗಾಗಿ ಸತತವಾಗಿ ಉದ್ಯೋಗಶೀಲವಾಗಿರುವ, ಪರಮಾತ್ಮನಲ್ಲಿ ಭಕ್ತಿಯಿರುವ, ಆಸಕ್ತಿ ರಹಿತನಾದ, ಸಂಪೂರ್ಣವಾಗಿ ಪ್ರಾಣಿಗಳಲ್ಲಿ ವೈರಭಾವ ರಹಿತನಾಗಿರುವ ವ್ಯಕ್ತಿಯನ್ನೇ ಅನನ್ಯ ಭಕ್ತನೆಂದು ಕರೆಯುವುದು. ಇಂತಹ ಭಕ್ತಿಯ ಫಲವು ಪರಮಾತ್ಮನ ಪ್ರಾಪ್ತಿ ಯಾಗಿರುತ್ತದೆ.

ಪಾಮರ ಜನರ ಶ್ರೇಯಸ್ಸಿಗಾಗಿ ನಾರದರು 'ಭಕ್ತಿಸೂತ್ರ'ವನ್ನು ರಚಿಸಿದರು. ಈ ಸೂತ್ರಗಳ ಒಟ್ಟು ಸಂಖ್ಯೆ 84 ; 5 ಅಧ್ಯಾಯಗಳು. ಇದಕ್ಕೆ 'ಶಿವಾನುಶಾಸನ' ವೆಂಬ ಇನ್ನೊಂದು ಹೆಸರೂ ಇದೆ. ಸಂಶಯ ಕ್ಕೆಡೆಗೊಡದ ಸಾರವತ್ತಾದ ಸ್ವಲ್ಪ ಶಬ್ದ ಗಳಿಂದ ಭಕ್ತಿ ಅಥವಾ ಪ್ರೇಮ ತತ್ತ್ವ ವನ್ನು ಶಾಸ್ತ್ರ ಪರಿಭಾಷೆಯಲ್ಲಿ ಇಲ್ಲಿ ವಿವರಿಸ ಲಾಗಿದೆ. 'ಜ್ಞಾನಯೋಗ', 'ಕರ್ಮ ಯೋಗ', 'ರಾಜಯೋಗ'ಗಳಿಗಿಂತ ಭಕ್ತಿ ಮೇಲ್ಮಟ್ಟದೆಂದು ಇದರಲ್ಲಿ ನಿರೂಪಿತ ವಾಗಿದೆ.

ಫಲರೂಪದಲ್ಲೇ ಭಗವಂತನನ್ನು ಸುಲಭ ವಾಗಿ ಪ್ರಸನ್ನನಾಗುವಂತೆ ಮಾಡಿಕೊಳ್ಳಲು ಇರುವ ಏಕೈಕ ಸಾಧನವೇ ಭಕ್ತಿ. ಮಿಕ್ಕ ಯೋಗಗಳಲ್ಲಿ ಅಹಂಕಾರ, ಅವಿನಯಗಳಿಗೆ ಅವಕಾಶವಿದ್ದೀತು.

ಜ್ಞಾನಯೋಗಿಗೆ ತಾನು ಜ್ಞಾನಿ ಎಂಬ ಅಹಂಭಾವವೂ, ಕರ್ಮಯೋಗಿಗೆ ತಾನು ಕರ್ಮಚಾರಿ ಎಂಬ ಹೆಮ್ಮೆಯೂ, ರಾಜ ಯೋಗಿಗೆ ತಾನು ದೃಢ; ನಿಷ್ಠನೆಂಬ ಅಹಂಕಾರವೂ ಪ್ರಾಪ್ತವಾಗಬಹುದು. ಆದರೆ ಭಕ್ತನಲ್ಲಿ ಆ ಭಾವನೆಗಳಿರುವುದಕ್ಕೆ ಎಳ್ಳಷ್ಟೂ ಎಡೆಯಿರುವುದಿಲ್ಲ. ಭಕ್ತಿಸ್ವತಃ ಪ್ರೇಮ ಸ್ವರೂಪವಾಗಿದ್ದು ಭಗವಂತನನ್ನು ಪ್ರೇಮ ಸ್ವರೂಪದಲ್ಲೇ ನೋಡುವುದಾಗಿದೆ. ಭಕ್ತನ ಹೃದಯದಲ್ಲಿ ಜನ್ಮತಾಳಿದ ಭಕ್ತಿಯು ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ ಮತ್ತು ಮಧುರ ಎಂಬ ಪಂಚ ಭಾವಗಳಲ್ಲಿ ವ್ಯಕ್ತವಾಗುತ್ತದೆ.

ಶಾಂತಭಾವ : ವೈಯಕ್ತಿಕ ಸಂಬಂಧ ಹೆಚ್ಚಾಗಿರದ ಆಧ್ಯಾತ್ಮಿಕ ಭಾವವೇ ಶಾಂತ. ನಮ್ಮ ಪ್ರಾಚೀನ ಋಷಿ ಮುನಿಗಳು ಅರಣ್ಯ ಗಳಲ್ಲಿ ಗೆಡ್ಡೆಗೆಣಸುಗಳನ್ನು ಆಹಾರವನ್ನಾಗಿ ಸೇವಿಸಿ ಯಮ - ನಿಯಮಗಳಿಂದ ಮನ ಸ್ಸನ್ನು ಭಗವಂತನಲ್ಲಿ ಕೇಂದ್ರೀಕರಿ ಸಲು ಯತ್ನಿಸಿದ ವಿಧಾನವೇ ಇದು.

ದಾಸ್ಯಭಾವ : ಭಗವಂತ ಸೇವ್ಯ, ತಾನು ಆತನ ಸೇವಕ ಎನ್ನುವ ಭಾವವೇ ದಾಸ್ಯಭಾವ.

ಸಖ್ಯಭಾವ: ಭಗವಂತನನ್ನು ಸ್ನೇಹಿತ ನಂತೆ ಕಾಣುವ ಭಾವವೇ ಇದು. ತನಗೂ ತನ್ನ ಸ್ನೇಹಿತನಿಗೂ ಒಂದು ತೆರನಾದ ಸಮಾನತೆ ಇರುವಂತೆ,ಭಕ್ತ ಭಗವಂತನಲ್ಲಿ ಆ ಸಮಾನತೆ ಹಾಗೂ ಆತ್ಮೀಯತೆಯನ್ನು ಕಾಣುತ್ತಾನೆ.

ವಾತ್ಸಲ್ಯಭಾವ: ತಂದೆತಾಯಂದಿರು ಮಕ್ಕಳನ್ನು ನೋಡುವ ಭಾವ. ತಂದೆ ತಾಯಿಗಳಿಗೆ ಮಗುವನ್ನು ಕಂಡರೆ ಗೌರವ ವಿರುವುದಿಲ್ಲ ; ಅಂಜಿಕೆಯಿರುವುದಿಲ್ಲ. ಮಗುವಿ ನಿಂದ ಅವರು ಏನನ್ನೂ ಅಪೇಕ್ಷಿಸುವುದಿಲ್ಲ. ಆದ್ದರಿಂದ ಮಗುವಿನ ಮೇಲಣ ಪ್ರೀತಿಯೇ ಅವರನ್ನು ಎಲ್ಲ ತ್ಯಾಗಕ್ಕೂ ಸಿದ್ಧರನ್ನಾಗಿ ಮಾಡುತ್ತದೆ. ಅದೇ ಪರಿಶುದ್ಧ ಪ್ರೀತಿ, ಆ ಭಗವಂತನ ಮೇಲಿದ್ದರೆ ಅದು 'ವಾತ್ಸಲ್ಯ ಭಾವ'ವೆನಿಸುತ್ತದೆ.

ಮಧುರಭಾವ: ಧ್ಯೇಯ ವಸ್ತು ವನ್ನು ಪ್ರಿಯತಮನೆಂದು ತಿಳಿಯುವ ಭಾವವೇ ಇದು. ಚೆನ್ನಮಲ್ಲಿಕಾರ್ಜುನನ್ನು ವರಿಸಿದ ಅಕ್ಕಮಹಾದೇವಿ,ಮತ್ತು ಶ್ರೀಕೃಷ್ಣ ಭಕ್ತೆ ಮೀರಾಬಾಯಿಯರು ಇದಕ್ಕೆ ಉತ್ತಮ ನಿದರ್ಶನರಾಗಿದ್ದಾರೆ. ಅಕ್ಕ

ನುಹಾದೇವಿಯು ಜಗದಾದಿ ಸಾರ್ವಭೌಮ ನನ್ನ ಗಂಡನಾಗಿ ಪಡೆಯ ಬೇಕೆಂದು ಹಂಬಲಿಸಿ ಕೃತಕೃತ್ಯಳಾದ ಮಹಾಚೇತನ.

ಸಾವ ಕೆಡುವ ಗಂಡರ–
ನೊಯ್ದು ಒಲೆಯೊಳಗಿಕ್ಕು

ಎಂಬ ದಿಟ್ಟತನದಿಂದ ಲೌಕಿಕ ಸಂಸಾರವನ್ನು ಮೀರಿ,

ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ
ಚೆಲುವಂಗೆ ನಾನೊಲಿದೆನಯ್ಯ''

ಎಂದು ಹೇಳಿ,

ಹರನೇ ಗಂಡನಾಗಬೇಕೆಂದು
ಬಹುಕಾಲ ಬಯಸಿದ್ದೆ ನೋಡಾ

ಎಂಬುದಾಗಿ ತನ್ನ ಬಯಕೆಯನ್ನು ತೋಡಿಕೊಂಡಿದ್ದಾಳೆ. ಕೊನೆಗೆ, ಚೆನ್ನಮಲ್ಲಿಕಾರ್ಜುನನ ಕೈ ಹಿಡಿದು ಆತನ ಹೃದಯ ಕಮಲದಲ್ಲಿ ಹೊಕ್ಕು, ಬೇರಿಲ್ಲದಂತೆ ಬೆರೆಸಿ ಒಂದಾಗುತ್ತಾಳೆ.

ಹೀಗೆ ಉದ್ಭವವಾದ ಈ ಭಾವಗಳು ನವ ವಿಧವಾಗಿ ಹೊರ ಹೊಮ್ಮುತ್ತವೆ. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಹಾಗೂ ಆತ್ಮ ನಿವೇದನಗಳೇ ಈ ಒಂಬತ್ತು ವಿಧಗಳು. ಇದನ್ನೇ 'ನವವಿಧಭಕ್ತಿ' ಎನ್ನುತ್ತಾರೆ.

ಶ್ರವಣ: ಶ್ರವಣವೆಂದರೆ ಕೇಳುವುದು ಎಂದರ್ಥ. ಪರಮಾತ್ಮನ ದಿವ್ಯ ನಾಮವನ್ನು, ಆತನ ಗುಣವರ್ಣನೆಯನ್ನು ಕೇಳುವುದೇ ಶ್ರವಣ. ಇದನ್ನೇ ಪುರಾಣ ಪುಣ್ಯ ಶ್ರವಣ ಎನ್ನುತ್ತಾರೆ.

ಕೀರ್ತನ: ಕರುಣಾಮಯನಾದ ಭಗವಂತನ ನಾಮಾವಳಿಯನ್ನು ಹಾಡುವುದೇ ಕೀರ್ತನ. ಸಂಗೀತವು ಪ್ರಮುಖವಾಗಿ ಕೀರ್ತನೆಗೋಸ್ಕರವಾಗಿಯೇ ಜನ್ಮತಾಳಿತೆಂದರೆ ತಪ್ಪಾಗಲಾರದು. ದೇವರು ನಮಗೆ ನಾಲಿಗೆಯನ್ನು ಕೊಟ್ಟಿರುವುದು ಪರಮಾತ್ಮನ ಭಜನೆಗಾಗಿಯೇ ವಿನಹ ಅನ್ಯಥಾ ಅಲ್ಲ.

ಸ್ಮರಣ: ಸ್ಮರಣವೆಂದರೆ ನೆನಪು, ಜ್ಞಾಪಕ, ಧ್ಯಾನ, ಚಿಂತನೆ ಅಣುರೇಣು ತೃಣಕಾಷ್ಠಗಳಲ್ಲಿರುವ ಸಚ್ಚಿದಾನಂದನನ್ನು ಹೃದಯಕಮಲದಲ್ಲಿ ಧ್ಯಾನ ಮಾಡುವುದೇ ಸ್ಮರಣ. ಕೀರ್ತನೆಗಿಂತಲೂ ಸ್ಮರಣವು ಮೇಲ್ಮಟ್ಟದ್ದು.

ಪಾದಸೇವನ: ಆರ್ತನನ್ನು ಉಪಚರಿಸುವುದೇ ಪಾದಸೇವನ. ಪಾದಗಳು ಇತರ ಅಂಗಗಳಿಗಿಂತ ಶ್ರೇಷ್ಠವಾದುದೆಂದು ಪರಿಗಣಿಸಲ್ಪಟ್ಟಿದೆ. ಹಿರಿಯರಿಗೆ ನಮಸ್ಕಾರ ಮಾಡುವಾಗ ಅವರ ಪಾದಗಳಿಗೆರಗುತ್ತೇವೆ. ಸನ್ಯಾಸಿಗಳಿಗೆ, ಗುರುಹಿರಿಯರಿಗೆ, ಪಾದಪೂಜೆ ಮಾಡುತ್ತೇವೆ. ಹಿರಿಯರ ಪಾದಧೂಳಿಯು ನನ್ನ 'ಶಿರದ ಮೇಲಿರಲೆಂದು ಅಪೇಕ್ಷಿಸುತ್ತೇವೆ. ಅದು ಸರ್ವದುರಂತಗಳನ್ನೂ ನಿವಾರಿಸುತ್ತದೆ.

ಅರ್ಚನ: ಅರ್ಚನವೆಂದರೆ ಪೂಜೆ ಎಂದರ್ಥ. ಇದನ್ನೇ ದೇವತಾರ್ಚನೆ ಎನ್ನುತ್ತಾರೆ. ವೇದಾಂತಿಗಳೂ, ಯೋಗಿಗಳೂ ಹೇಳುವ ಪ್ರಕಾರ ಪರಮಾತ್ಮನು ನಿರಾಕಾರಿ ಹಾಗೂ ನಿರ್ಗುಣ. ಹಾಗಿದ್ದಲ್ಲಿ ಅಂತಹ ನಿರಾಕಾರಿಯನ್ನು ಪೂಜಿಸುವುದೆಂತು? ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ನಮ್ಮವರು ಇದಕ್ಕೆ ಸಮಾಧಾನವನ್ನು ಕೊಟ್ಟಿದ್ದಾರೆ.

ಉಪಾಸಕಾನಾಂ ಕಾರ್ಯಾರ್ಥೇಷು
ಪರಬ್ರಹ್ಮಣೋ ರೂಪಕಲ್ಪನಂ

ಅಂದರೆ ಉಪಾಸಕರ ಇಷ್ಟಸಿದ್ಧಿಗಾಗಿ ನಿರಾಕಾರನಿಗೆ ರೂಪವನ್ನು ಆತನ ಭಕ್ತರೇ ಕಲ್ಪಿಸಿದ್ದಾರೆ. ನಿರ್ಗುಣ ನಿರಾಕಾರನೇ ಭಕ್ತನ ಭಕ್ತಿಗೆ ಸಗುಣ ಸಾಕಾರನಾಗಿ ತೋರುವನು. ದೇವರು ಒಬ್ಬ ವ್ಯಕ್ತಿಯಲ್ಲ– ಅವನು ಶಕ್ತಿ, ಆದರೆ ಭಕ್ತರ ಪಾಲಿಗೆ ಪರಮ ಆಪ್ತನಾದ ವ್ಯಕ್ತಿಯಾಗಿ ವ್ಯಕ್ತನಾಗಬಲ್ಲ. ಇಷ್ಟು ಮಾತ್ರವಲ್ಲದೆ, ಧಾರ್ಮಿಕ ರಂಗದಲ್ಲಿ ಇನ್ನೊಂದು ನಂಬುಗೆಯೂ ಇದೆ. ಅಪಾರ ಅಧ್ಯಾತ್ಮಿಕ ಶಕ್ತಿಯಿಂದ ಒಡಗೂಡಿದ, ಭಗವಂತನ ಅವತಾರವೆಂದು ಪರಿಗಣಿತವಾದ ಮಹಾತ್ಮರನ್ನೂ ಸಂಕೇತ, ಪ್ರತೀಕಗಳ ದೃಷ್ಟಿಯಿಂದ ನೋಡದೆ ಭಗವಂತನೊಂದಿಗೆ ತಾದಾತ್ಮ್ಯ ದೃಷ್ಟಿಯಿಂದ ನೋಡುವುದು.

ಮಹಾತ್ಮರನ್ನೂ ಅವತಾರಿಗಳನ್ನೂ ಪ್ರತಿಮೆ ಅಥವಾ ಮೂರ್ತಿಗಳ ಮೂಲಕ ಪೂಜಿಸುತ್ತಾರೆ. ಪ್ರತೀಕದ ತತ್ತ್ವವು ಪ್ರತಿಮೆಗೂ ಅನ್ವಯಿಸುತ್ತದೆ. ಆದರೆ ಭಕ್ತರು ಮೂರ್ತಿಯಲ್ಲೇ ಭಗವಂತನ ಸಾನ್ನಿಧ್ಯವನ್ನು ಕಾಣುತ್ತಾರೆ. ಮೂರ್ತಿಯನ್ನು ಜೀವಂತ ಭಗವಂತನೆಂದೇ ತೀವ್ರ ಭಾವನೆಯಿಂದ ಗೌರವಿಸಿ ಪೂಜಿಸುತ್ತಾರೆ. ಇದು ಭಕ್ತಿಪಥದಲ್ಲಿ ಅನುಸರಿಸುವ ಒಂದು ನಿಯಮ.

ವಂದನ: ವಂದನೆ ಎಂದರೆ ನಮ್ಮ ಕೃತಜ್ಞತೆ. ಎಂದರೆ ಭಕ್ತಿಯೊಂದೇ. ಈ ವಂದನೆಯೂ, ನಮಸ್ಕಾರ, ಪೂಜೆ, ಭಜನೆ, ಸ್ಮರಣೆಯೇ ಆದಿಯಾಗಿ ಯಾವ ರೂಪದಲ್ಲಾದರೂ ಇರಬಹುದು.

"ಗುರುಪದವಂದನಂ ಶಿರಕೆ"

–ಎನ್ನುತ್ತದೆ ಸುಭಾಷಿತ, ಭಕ್ತರಿಗೆ ಶಿರಸ್ಸಿರುವುದು ದೇವನನ್ನು ವಂದಿಸುವುದಕ್ಕಾಗಿಯೇ.

ದಾಸ್ಯ: ದಾಸ್ಯಭಾವದ ಶರಣಾಗತಿಯಿಂದ ತುಂಬಿರುವುದೇ ದಾಸ್ಯಭಕ್ತಿ. ಇಂತಹ ಭಾವದ ಪರಾಕಾಷ್ಠೆಯನ್ನು ತಲುಪಿದ, ತಾವು ದೇವರ ದಾಸರೆಂದು ಹೇಳಿಕೊಳ್ಳುವ ಭಕ್ತರ ಪಂಥಕ್ಕೆ ದಾಸಪಂಥವೆಂದು ಹೆಸರು. ಹದಿನೈದನೇ ಶತಮಾನದಲ್ಲಿ ಕರ್ನಾಟಕದಲ್ಲಿ ದಾಸಕೂಟವು ಸ್ಥಾಪನೆಯಾಯಿತು. ಅದಕ್ಕೆ ಹಿಂದೆಯೇ ಹನ್ನೆರಡನೆ ಶತಮಾನದಲ್ಲಿ ಶಿವಶರಣ ಬಸವಣ್ಣನವರೇ ಆದಿಯಾಗಿ, ಅನೇಕ ಅವರ ಸಮಕಾಲೀನ ಶರಣರು ಭಕ್ತಿಪಂಥವನ್ನು ಸುಭದ್ರವಾಗಿ ನೆಲೆಗೊಳಿಸಿದ್ದರು.

ಸಖ್ಯ: ಸಖ್ಯಭಾವದಿಂದ ಹುಟ್ಟುವ ಭಕ್ತಿಯೇ ಸಖ್ಯಭಕ್ತಿ. ಇಲ್ಲಿ ದೇವನನ್ನು ಸಖನೆಂದು ಭಾವಿಸಲಾಗುತ್ತದೆ. ನಿಂದಾಸ್ತುತಿಗಳು ಸಖ್ಯಭಕ್ತಿಯ ಒಂದು ರೂಪವೆಂದು ಹೇಳಬಹುದು. ಇಲ್ಲಿ ಭಕ್ತಿಯೊಡನೆ ಸಖ್ಯವೂ ಸೇರಿರುವುದರಿಂದ ಸಲಿಗೆ, ಮುನಿಸು ಎಲ್ಲವೂ ಇವೆ.

ಬೋಳೆಯನೆಂದು ನಂಬಬೇಡ,
ಥಾಳಕನವನು ಜಗದ ಬಿನ್ನಾಣಿ
—ಅಕ್ಕಮಹಾದೇವಿ

ದೇವನೊಳ್ಳಿದನೆಂದು ಮುಯ್ಯಾನಲು
ಬೇಡ
ತರಕಟ ಕಾಡಿದನೊಳ್ಳಿದನೆ ?
ಆಳಿಸುವ ನಗಿಸುವನೊಳ್ಳಿದನೆ ?
—ಬಸವಣ್ಣ

ಏನ ಬೇಡಲಿ ಚಿತ್ತಚಂಚಲ ಕಠಿಣನ
—ಪುರಂದರದಾಸರು

"ಏನ ಬರೆದೆಯೊ ಬ್ರಹ್ಮ
ನೀನೆಷ್ಟು ನಿರ್ದಯನೋ"
—ಪುರಂದರದಾಸರು.

ಆತ್ಮನಿವೇದನ: ಆತ್ಮ ನಿವೇದನವು ವಿರಕ್ತಿಭಾವದಿಂದ ಹುಟ್ಟುತ್ತದೆ. ತನ್ನನ್ನು ಸಂಪೂರ್ಣವಾಗಿ ಆ ಪರಮಾತ್ಮನಿಗೆ ಅರ್ಪಿಸಿಕೊಳ್ಳುವುದೇ ಆತ್ಮನಿವೇದನ. 'ನಿವೇದನ' ವೆಂದರೆ ನೈವೇದ್ಯ. ಪರಮಾತ್ಮನಿಗೆ ನಮ್ಮ ಆತ್ಮವನ್ನೇ ನೈವೇದ್ಯವಾಗಿ ಸಮರ್ಪಿಸುವುದು ಇದನ್ನೇ 'ಈಶ್ವರ ಪ್ರಣಿಧಾನ' ವೆಂತಲೂ ಕರೆಯುವರು. ನಾವು ಮಾಡಿದ ಎಲ್ಲ ಕರ್ಮಗಳನ್ನೂ ಆ ಪರಮಾತ್ಮನಿಗೆ ಸಮರ್ಪಿಸುವುದು.

'ಆತ್ಮ ನಿವೇದನ'ಕ್ಕೆ ಪುಲಸ್ತ್ಯ ಬ್ರಹ್ಮನ ಮೊಮ್ಮಗನಾದ ರಾವಣನು ಉತ್ತಮ ನಿದರ್ಶನ. ಪರಮೇಶ್ವರನನ್ನು ಪ್ರತ್ಯಕ್ಷಗೊಳಿಸಿಕೊಳ್ಳುವುದಕ್ಕಾಗಿ ಘೋರ ತಪಸ್ಸನ್ನು ಗೈದು ಕೊನೆಗೆ ತನ್ನ ಶರೀರದ ಒಂದೊಂದೇ ಭಾಗವನ್ನು ಕತ್ತರಿಸಿ ಶಿವನಿಗೆ ಸಮರ್ಪಿಸಿ ಕೊನೆಗೆ ಪೂರ್ಣಾಹುತಿಗೆ ತನ್ನ ಶಿರಸ್ಸನ್ನೇ ಅರ್ಪಿಸಲು ಹೊರಟ ಧೀಮಂತ ಭಕ್ತ. ಇದೇ ಭಕ್ತಿಯ ಪರಾಕಾಷ್ಠೆ. ಆತ್ಮ ನಿವೇದನದ ಮುಂದೆ ಭಕ್ತನ ಮತ್ತಾವ ಕರ್ತವ್ಯವೂ ಉಳಿದಿರುವುದಿಲ್ಲ. ಇಲ್ಲಿ ಅಹಂಕಾರ ಮಮಕಾರಗಳಲ್ಲಿ ಲಯವಾಗಿ ಆ ಪರಮಾತ್ಮನ ದರ್ಶನವೊಂದೇ ಏಕೈಕ ಗುರಿಯಾಗಿರುತ್ತದೆ.

ಈ ನವವಿಧ ಭಕ್ತಿಯು ಎರಡು ತೆರನಾಗಿದೆ. ಮೊದಲನೆಯದು 'ಸಕಾಮ ಭಕ್ತಿ' ಎರಡನೆಯದು 'ನಿಷ್ಕಾಮ ಭಕ್ತಿ' ಸಕಾಮ ಭಕ್ತಿಯನ್ನು 'ಕಾಮ್ಯ ಭಕ್ತಿ'ಯೆಂದೂ ಕರೆಯುತ್ತಾರೆ. ಪರಮಾತ್ಮನನ್ನು ಷೋಡಶೋಪಚಾರಗಳಿಂದ ಅರ್ಚಿಸಿ, ಆತನನ್ನು ಸುಪ್ರೀತಗೊಳಿಸಿ ತನ್ಮೂಲಕ ತನಗೆ ಬೇಕಾದ ಆಸ್ತಿ, ಐಶ್ವರ್ಯ, ಹೆಣ್ಣು, ಸಂತತಿ, ವಿದ್ಯೆ, ಕೀರ್ತಿ, ಜಯ ಮೊದಲಾದುವುಗಳನ್ನು ಬೇಡುವುದು. ಪೂಜೆಯ ಅಂತ್ಯದಲ್ಲಿ.

ಮನಸಾಭೀಷ್ಟ ಪ್ರಾರ್ಥನಾಂ
ಸಮರ್ಪಯಾಮಿ

ಎಂದು ಹೇಳುವ ಉದ್ದೇಶ ಇದೇ ಆಗಿದೆ. ಒಂದು ವೇಳೆ ಐಹಿಕ ಸುಖಗಳನ್ನೂ ಬೇಡದೆ ಮೋಕ್ಷವನ್ನು ಬೇಡಿದರೆ ಅದೂ ಸಹ ಕಾಮ್ಯವೇ, ಭಕ್ತಿ ಭಕ್ತಿಗಾಗಿಯೇ ವಿನಾ ಮೋಕ್ಷಕ್ಕಲ್ಲ. ಮೋಕ್ಷವನ್ನು ದಯಪಾಲಿಸುವುದು ಅಥವಾ ಬಿಡುವುದು 'ಅವನಿಗೆ' ಸೇರಿದ್ದು, ಕಾಮ್ಯಗಳಾಗಿ ಮಾಡುವ ಕಲ್ಪೋಕ್ತ ವ್ರತಗಳ ಕೊನೆಯಲ್ಲಿ, ಬೇಡಿಕೆಯ ಒಂದು ಪಟ್ಟಿಯೇ ಇದೆ.

ಪುತ್ರಾನ್‌ದೇಹಿ ಧನಂ ದೇಹಿ
ಸೌಭಾಗ್ಯಂ ದೇಹಿ ಸುವ್ರತೇ ।
ಅನ್ಯಾಂಶ್ಚ ಸರ್ವಕಾಮಾಂಶ್ಚ
ದೇಹಿ ದೇವಿ ನಮೋಽಸ್ತುತೇ ॥

ಯಾರು ಯಾರಿಗೆ ಏನೇನು ಬೇಕೋ ಅವುಗಳನ್ನು ಬೇಡಿಕೊಳ್ಳಬಹುದು. ನಾವು ಪೂಜೆ ಮಾಡಲು ಪ್ರಾರಂಭಿಸುವುದಕ್ಕೆ ಮೊದಲೇ ಸಂಕಲ್ಪ ಮಾಡುತ್ತೇವೆ. ನಮ್ಮ ಅರ್ಚನೆ ಏತಕ್ಕೋಸ್ಕರವೆಂದು.

" ಧರ್ಮ ಅರ್ಥ ಕಾಮ ಮೋಕ್ಷ
ಚತುರ್ವಿಧ ಫಲಪುರುಷಾರ್ಥ
ಸಿದ್ಧ್ಯರ್ಥಂ ಸಮಸ್ತ ದುರಿತೋಪ–
ಶಾಂತ್ಯರ್ಥಂ, ಸಮಸ್ತ ಮಂಗಳಾ
ವಾಪ್ತ್ಯರ್ಥಂ ಅಪಮೃತ್ಯು ದೋಷ
ಪರಿಹಾರಾರ್ಥಂ ... ... ..."

ಇದಕ್ಕೆ ಅನುಸಾರವಾಗಿಯೇ ಇದೇ ಕೊನೆಯ ಬೇಡಿಕೆ. ಅಂದರೆ ಇವುಗಳೆಲ್ಲಾ ನಮಗೆ ಬೇಡವೆಂದು ಇದರರ್ಥವಲ್ಲ, ಇಡೀ ವಿಶ್ವದಲ್ಲಿರುವ ಸಚರಾಚರಗಳ ಹೊಣೆಯನ್ನು ಹೊತ್ತಿರುವ ಆ ಪರಮಾತ್ಮನು ನಮ್ಮನ್ನು ರಕ್ಷಿಸಿಯೇ ರಕ್ಷಿಸುತ್ತಾನೆ. ಅದನ್ನೆಲ್ಲಾ ಕೇಳಬೇಕಾದ ಅಗತ್ಯವೇನಿದೆ?

" ಪದವೀ ಪೂರ್ವಪುಣ್ಯಾನಾಂ "

ಎಂಬಂತೆ ನಮ್ಮ ಪೂರ್ವಾರ್ಜಿತ ಕರ್ಮಫಲಗಳಿಗನುಸಾರವಾಗಿ ಇಹಲೋಕದಲ್ಲಿ ಸುಖ ದುಃಖಗಳನ್ನು ಹೊಂದುತ್ತೇವೆ. ದುಃಖದಿಂದ ಪಾರುಮಾಡು ಎಂದಾಗಲೀ, ಸುಖವನ್ನು ನೀಡು ಎಂದಾಗಲೀ ಕೇಳುವುದರಲ್ಲಿ ಅರ್ಥವಿಲ್ಲ. ಸುಖ ದುಃಖಗಳನ್ನೂ, ಲಾಭ ನಷ್ಟಗಳನ್ನೂ, ಜಯಾಪಜಯಗಳನ್ನೂ ಸಮಾನವಾಗಿ ಕಾಣಬೇಕು. ಇದಕ್ಕೆಲ್ಲಾ ನಾವು ಆ ಪರಮಾತ್ಮನನ್ನು ಹೊಣೆ ಮಾಡಬಾರದು.

ಸಕಾಮಭಕ್ತಿಯಿಂದ ಐಹಿಕ ಸುಖವು ಒಂದು ವೇಳೆ ದೊರೆಯಬಹುದಾದರೂ. ಪರಮಾತ್ಮನ ಸಾಯುಜ್ಯವು ಖಂಡಿತ ಸಿಗಲಾರದು. ಕಾಮಧೇನುವೇ ಪ್ರತ್ಯಕ್ಷವಾಗಿರುವಾಗ ಒಂದು ಲೋಟ ಮಜ್ಜಿಗೆಯನ್ನು ಕೇಳಿದಂತಾಗಿದೆ ಈ ಬಯಕೆ. ಕಲ್ಪವೃಕ್ಷದ ಕೆಳಗೇ ನಿಂತು ಒಡಕು ಮಡಕೆಕಾಗಿ ಯಾಚಿಸಿದಂತಾಗಿದೆ ಈ ಅಪೇಕ್ಷೆ. ಪರಮಾತ್ಮನ ಮುಂದೆ ಆತನ ಪ್ರಾಪ್ತಿಗಾಗಿ ಗೋಗೆರೆಯದೆ ಕೀಳು ವಸ್ತುವಿಗಾಗಿ ಬೇಡುವುದೆಂದರೆ ಅದೊಂದು ಮೂರ್ಖತನವಲ್ಲದೆ ಮತ್ತೇನು! ನಿಜವಾದ ಭಕ್ತರು ಭಗವಂತನಲ್ಲಿ ಏನನ್ನೂ ಅಪೇಕ್ಷಿಸುವುದಿಲ್ಲ. ಅವರು ತಮ್ಮನ್ನೇ ತಾವು ಪರಮಾತ್ಮನಲ್ಲಿ ಅರ್ಪಿಸಿಕೊಂಡಿರುವುದರಿಂದ ಅವರಿಗೆ ಇನ್ನಾವ ಬಯಕೆಯೂ ಇರುವುದಿಲ್ಲ. ಅಲ್ಲದೆ

ಅನನ್ಯಾಶ್ಚಿಂತಯಂತೋ ಮಾಂ
ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಮ್ ।

ಎಂದು ಗೀತೆಯು ಹೇಳುತ್ತದೆ. ಅನನ್ಯರಾಗಿ ಯಾರು ಆ ಪರಮಾತ್ಮನನ್ನು ಶ್ರದ್ಧಾ ಭಕ್ತಿಗಳಿಂದ ಧ್ಯಾನಿಸುತ್ತಾರೋ ಅಂತಹ ನಿತ್ಯಯುಕ್ತರಾದವರ 'ಯೋಗಕ್ಷೇಮ'ವನ್ನು ಆತನೇ ವಹಿಸಿಕೊಳ್ಳುತ್ತಾನೆ.

**ಸಪ್ತಗಿರಿಯ ಬಗ್ಗೆ**
**ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

## ಉಡುಪಿಯ ಶ್ರೀಕೃಷ್ಣ ಪೂಜೆ

## -ಶ್ರೀ ಶ್ರೀ ವಿಶ್ವೇಶ

### ತೀರ್ಥಸ್ವಾಮಿಜೀ ಸ್ವೀಕಾರ

ಮಧ್ವಾಚಾರ್ಯರು ಸ್ಥಾಪಿಸಿದ ಅಷ್ಟ ಮಠಗಳಲ್ಲಿ ಒಂದಾದ ಪೇಜಾವರ ಮಠದ ಪೀಠಾಧಿಪತಿ ಶ್ರೀ ಶ್ರೀ ವಿಶ್ವೇಶ ತೀರ್ಥ ಶ್ರೀಪಾದಂಗಳವರು 1984 ಜನವರಿ 18 ರಂದು ಉಡುಪಿಯ ಶ್ರೀ ಕೃಷ್ಣ ದೇವಸ್ಥಾನದಲ್ಲಿ ಎರಡು ವರ್ಷಗಳ ಕಾಲದ ಪೂಜಾಧಿಕಾರವನ್ನು ಈ ಪರ್ಯಾಯದಲ್ಲಿ ಪಡೆದರು.

ಪರ್ಯಾಯ ಮಹೋತ್ಸವದಲ್ಲಿ ಪೂಜಾಧಿಕಾರ ಪಡೆದು ಮಾತನಾಡುತ್ತ ಶ್ರೀಪಾದಂಗಳವರು ಹದಿಮೂರನೇ ಶತಮಾನದಲ್ಲಿ ಮಧ್ವಾಚಾರ್ಯರು ಉಡುಪಿಯಲ್ಲಿ ಶ್ರೀ ಕೃಷ್ಣ ವಿಗ್ರಹವನ್ನು ಭಕ್ತಿಯ ಪ್ರಸಾರಕ್ಕಾಗಿ ಸ್ಥಾಪಿಸಿದರೆಂದೂ, ಈ ಉದಾತ್ತ ತತ್ತ್ವವನ್ನು ಒಪ್ಪಿಕೊಂಡು ಕಾಲಕ್ರಮದಲ್ಲಿ ಶ್ರೇಷ್ಠ ಸಂತರಾದ ಶ್ರೀಪಾದರಾಯ, ವ್ಯಾಸರಾಯ, ಪುರಂದರ ದಾಸ, ವಾದಿರಾಜರು ಮೊದಲಾದವರು ಭಕ್ತಿಯನ್ನು ಹರಡುವಲ್ಲಿ ಯಶಸ್ವಿಯಾಗಿ ಕೆಲಸ ಮಾಡಿದರೆಂದೂ, ಅದೇ ಪರಂಪರೆಯನ್ನು ತಾವು ಮುಂದುವರಿಸಲು ಸಂಕಲ್ಪ ಮಾಡಿರುವುದಾಗಿಯೂ, ಇಂತಲ್ಲಿ ಜನ ತಮಗೆ ಬೆಂಬಲವನ್ನು ನೀಡಬೇಕೆಂದೂ ಬೇಡಿದರು.

ಉಡುಪಿಯಲ್ಲಿ ಪರ್ಯಾಯ ಮಹೋತ್ಸವವನ್ನು ಎರಡುವರ್ಷಗಳಿಗೊಮ್ಮೆ ಆಚರಿಸಲಾಗುತ್ತದೆ. ಅಷ್ಟ ಮಠಗಳವಲ್ಲಿ ಎರಡು ವರ್ಷಕ್ಕೊಮ್ಮೆ ಶ್ರೀಕೃಷ್ಣ ಪೂಜೆಯ ಅಧಿಕಾರ ಆವರ್ತನವಾಗುವುದೇ ಇಲ್ಲಿನ ಉದ್ದೇಶ. ಈ ಬಾರಿ ಇಲ್ಲಿನ ವಸಂತ ಮಹಲಿನಲ್ಲಿ ನಡೆದ ಸರಳ ಸಮಾರಂಭದಲ್ಲಿ ಕಾಣಿಯೂರು ಮಠಾಧೀಶರಾದ ಶ್ರೀ ಶ್ರೀ ವಿದ್ಯಾವಾರಿನಿಧಿ ತೀರ್ಥರಿಂದ ಶ್ರೀ ಕೃಷ್ಣ ಪೂಜಾಧಿಕಾರವನ್ನು ಶ್ರೀ ಶ್ರೀ ವಿಶ್ವೇಶ ತೀರ್ಥರು ಸ್ವೀಕರಿಸಿದರು- ಆಚಾರ್ಯ ಮಧ್ವರು ಸ್ಥಾಪಿದ ಎಂಟು ಮಠಗಳೆಂದರೆ ಫಲಿಮಾರು, ಅದಮಾರು, ಕೃಷ್ಣಾಪುರ, ಪುತ್ತಿಗೆ, ಶೀರೂರು, ಸೋದೆ, ಕಾಣಿಯೂರು, ಪೇಜಾವರ ಮಠಗಳು. ಈ ಮಠಾಧಿಪತಿಗಳು ಎರಡೆರಡು ವರ್ಷಗಳಿಗೊಮ್ಮೆ ಉಡುಪಿಯ ಶ್ರೀಕೃಷ್ಣ ಪೂಜಾಧಿಕಾರವನ್ನು ಪಡೆಯುವ ಪದ್ಧತಿಯು ಶ್ರೀವಾದಿರಾಜರ ಕಾಲದಲ್ಲಿ ಬಳಕೆಗೆ ಬಂದಿತು.

27-4-1931 ರಲ್ಲಿ ನಾರಾಯಣಾಚಾರ್ಯ ಕಮಲಮ್ಮ ದಂಪತಿಗಳಲ್ಲಿ ಹುಟ್ಟಿ ವೆಂಕಟರಮಣ ಎಂಬ ಜನ್ಮ ನಾಮವನ್ನು ಪಡೆದು, 1943 ರಲ್ಲಿ ಪೇಜಾವರ ಮಠದ ಉತ್ತರಾಧಿಕಾರಿಯಾಗಿ ಶ್ರೀ ವಿಶ್ವಮಾನ್ಯ ತೀರ್ಥರಿಂದ ವಿಶ್ವೇಶತೀರ್ಥ ಎಂಬ ಆಶ್ರಮ ನಾಮವನ್ನು ಪಡೆದು ದೀಕ್ಷೆ ಹೊಂದಿದ ಶ್ರೀಪಾದಂಗಳವರು ಶ್ರೀಕೃಷ್ಣ ಪೂಜಾಧಿಕಾರವನ್ನು ಪಡೆಯುತ್ತಿರುವುದು ಇದು ಮೂರನೆಯ ಬಾರಿಗೆ. ಅಖಿಲ ಭಾರತ ಮಧ್ವ ಮಹಾಮಂಡಲ, ಪೂರ್ಣಪ್ರಜ್ಞ ವಿದ್ಯಾಪೀಠ ಮೊದಲಾದವುಗಳ ಸ್ಥಾಪನೆ ಮಾಡಿದ ಶ್ರೀಗಳವರು ವಿಶ್ವಹಿಂದೂ ಪರಿಷತ್ತು ತಿ. ತಿ. ದೇವಸ್ಥಾನಗಳ ಹಿಂದೂ ಧರ್ಮ ರಕ್ಷಣ ಸಂಸ್ಥೆ ಮೊದಲಾದವುಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ ಹಿಂದೂಗಳ ಐಕ್ಯತೆಗೆ ಶ್ರಮಿಸುತ್ತಿರುವುದೇ ಅಲ್ಲದೆ, ಹಲವಾರು ಧಾರ್ಮಿಕ ಕೃತಿಗಳ ಪ್ರಕಾಶನಕ್ಕೂ ಕಾರಣರಾಗಿದ್ದಾರೆ. ಬಿಜಾಪುರದ ಬರಗಾಲದಲ್ಲಿ ಗಂಜಿ ಕೇಂದ್ರ ಗೋಕೇಂದ್ರಗಳನ್ನು ಸ್ಥಾಪಿಸಿ ಜನ ಸೇವೆಯನ್ನು ಮಾಡಿದ್ದು, ಆಂಧ್ರಪ್ರದೇಶದ ನೆರೆಹಾವಳಿಯಲ್ಲಿ ಸಂತ್ರಸ್ತರಿಗೆ ನೆರವು ನೀಡಿದ್ದು, ಅವರ ಮಾನವೀಯ ಸೇವಾಭಾವನೆಗಳ ದ್ಯೋತಕ.

---

## ಕರ್ನಾಟಕದಲ್ಲಿ......

ಸ್ವಾಮಿಗಳ ಪರ್ಯಾಯಕ್ಕೆ ಹಿಂದೆ ಅವರ ಐದು ತಿಂಗಳ ಪ್ರವಾಸ ಕಾಲದಲ್ಲಿ ಬಹಳಷ್ಟು ಜನರನ್ನು ಪರ್ಯಾಯಕ್ಕೆ ಆಹ್ವಾನಿಸಿದ್ದರಿಂದ ಉಡುಪಿಯಲ್ಲಿ ಈಬಾರಿ ಹಿಂದೆಂದೂ ಇಲ್ಲದಂತಹ ಜನಸಂದಣಿಯಿದ್ದಿತು.

ನಾಲ್ಕು ಮಠಗಳ ಪೀಠಾಧಿಪತಿಗಳು ಮೂರು ಮಠಗಳ ಕಿರಿಯ ಉತ್ತರಾಧಿಕಾರಿಗಳೂ, ಭಾಗವಹಿಸಿದ ಮೆರವಣಿಗೆಯಲ್ಲಿ ಆಗಮಿಸಿದ ಶ್ರೀಶ್ರೀಗಳು ಶ್ರೀಕೃಷ್ಣ ಪೂಜಾಧಿಕಾರ ಸ್ವೀಕರಣದ ನಂತರ ಪರ್ಯಾಯದ ದರ್ಬಾರ್ ಅನ್ನು ನಡೆಸಿದರು. ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗ್ಗಡೆ, ಕೇಂದ್ರದ ಅರ್ಥಶಾಖೆಯ ಉಪಮಂತ್ರಿ ಶ್ರೀ ಜನಾರ್ಧನ ಪೂಜಾರಿ, ಚಲನಚಿತ್ರನಟ ಶ್ರೀ ರಾಜಕುಮಾರ್ ಅವರುಗಳೂ ಭಾಗವಹಿಸಿದ್ದ ಸಭೆಯಲ್ಲಿ ಹಲವಾರು ಸಾಹಿತ್ಯಕ, ಸಾಮಾಜಿಕ ಕಾರ್ಯಕರ್ತರನ್ನು ಸತ್ಕರಿಸಲಾಯಿತು.

ಅದಮಾರು ಮಠ, ಫಲಿಮಾರು ಮಠ ಸುಬ್ರಹ್ಮಣ್ಯಮಠಗಳ ಸ್ವಾಮಿಗಳೂ ಮತ್ತಿತರರೂ ಶ್ರೀಪಾದಂಗಳನ್ನು ಅಭಿನಂದಿಸಿದರು. ಉಡುಪಿಯ ಪುರಸಭೆಯ ಅಧ್ಯಕ್ಷ ಶ್ರೀ ಸೋಮಶೇಖರ ಭಟ್ಟರು ಹಾರಾರ್ಪಣೆ ಮಾಡಿದರು. ಸ್ವಾಗತ ಸಮಿತಿಯ ಅಧ್ಯಕ್ಷ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರು ಸ್ವಾಗತಿಸಿದ ಸಭೆಯನ್ನು ಶ್ರೀ ಹರಿದಾಸಭಟ್ಟ ಅವರು ವಂದಿಸಿದರು.



## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಗಳು

ದೇಶ ವಿದೇಶಗಳಲ್ಲಿನ ಹರಡಿರುವ ವಿವಿಧ ಕಡೆಗಳ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಗಳ ಬಗ್ಗೆ ಒಂದು ಸಮಗ್ರ ಕೋಶವೊಂದನ್ನು ಹೊರತರಲು ತಿ. ತಿ. ದೇ ನಿಶ್ಚಯಿಸಿದೆ. ಹಾಗಾಗಿ ನಿಮ್ಮ ನಿಮ್ಮ ಸ್ಥಳಗಳಲ್ಲಿನ ಶ್ರೀ ವೆಂಕಟೇಶ್ವರಸ್ವಾಮಿಯ ದೇವಾಲಯಗಳ ಬಗ್ಗೆ ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಹಿನ್ನೆಲೆ, ಶಿಲ್ಪ ಕಲೆ, ವಾಸ್ತು ವಿವರಣೆಗಳೊಡನೆ ಲೇಖನಗಳನ್ನು ಕಳುಹಿಸಿಕೊಡಬೇಕೆಂದು ಕೋರಲಾಗಿದೆ. ದೇವಾಲಯದ ಬಳಿಯ ರಸ್ತೆ – ರೈಲು, ಸೌಲಭ್ಯ ವಸತಿ ಸೌಕರ್ಯಗಳನ್ನೂ, ಫೋಟೋಗಳನ್ನೂ ಒಳಗೊಂಡಿರಬೇಕೆಂದು ಸೂಚಿಸಲಾಗಿದೆ. ಲೇಖನಗಳು ಆಂಗ್ಲ ಭಾಷೆಯಲ್ಲಿದ್ದಲ್ಲಿ ಹೆಚ್ಚು ಅನುಕೂಲಕರ.

ಮಿಕ್ಕ ವಿವರಗಳಿಗೆ:–

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ – 517501
ಚಿತ್ತೂರು ಜಿಲ್ಲೆ, ಆಂ.ಪ್ರ.

## ವಾರ್ತಾಲಹರಿ

## ಒಂದೇ ದಿನದಲ್ಲಿ ಎಂಬತ್ತು ಸಾವಿರ ಮಂದಿಯ ಶ್ರೀನಿವಾಸನ ದರ್ಶನ

1984 ರ ಜನವರಿ 1 ರಂದು ಹಿಂದೆಂದೂ ಇಲ್ಲದಂತೆ ತಿರುಮಲೆಯಲ್ಲಿ ಯಾತ್ರಿಕ ಸಂದೋಹ ಹೆಚ್ಚಾಗಿದ್ದು ಆ ದಿನದಲ್ಲಿ ಮಾತ್ರವೇ ಎಂಬತ್ತು ಸಾವಿರಕ್ಕೂ ಹೆಚ್ಚುಮಂದಿ ಶ್ರೀನಿವಾಸನ ದರ್ಶನವನ್ನು ಪಡೆದರೆಂದು ವರದಿಯಾಗಿದೆ.

ಜಾತಿಮತ ಪಂಥ ಭೇದಗಳಿಲ್ಲದೆ ಒಂದೇ ಸಮನೆ ಹೆಚ್ಚುತ್ತಿರುವ ಭಕ್ತರ ಸಂಖ್ಯೆಯನ್ನು ಹೊಂದಿರುವ ಈ ಪವಿತ್ರ ದೇವಾಲಯದ ಯಾತ್ರಿಕಾವಸರಗಳನ್ನು ಪೂರೈಸಲು ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿರೆಡ್ಡಿ ಅವರ ನೇರ ನೇತೃತ್ವದಲ್ಲಿ ವ್ಯಾಪಕ ಕ್ರಮಗಳನ್ನು ಕೈಗೊಳ್ಳಲಾಗಿದ್ದು, ಜನವರಿ1 ರ ಮುಂಜಾನೆ 3–30 ರಿಂದ ಜನವರಿ 2 ರ ರಾತ್ರಿ 2–30 ರವರೆಗೆ ದರ್ಶನಾವಕಾಶವನ್ನು (ದೇವಾಲಯದ ಸ್ವಾಮಿಕೈಂಕರ್ಯಗಳಿಗಾಗಿ ಯಥಾವಕಾಶ ಕಾಲವನ್ನು ನೀಡಿ) ಕಲ್ಪಿಸಲಾಗಿದ್ದಿತು. ಯಾತ್ರಿಕರ ಅನುಕೂಲಗಳನ್ನು ಗಮನಿಸಿ, ದೇವಸ್ಥಾನದ ಹೊರಗಡೆ ಅನೇಕ ಕಡೆಗಳಲ್ಲಿ ಪ್ರಸಾದಗಳ ಮಾರಾಟದ ಕೌಂಟರುಗಳನ್ನು ಏರ್ಪಡಿಸಲಾಗಿದ್ದಿತು. 25 ರೂಗಳ ವಿಶೇಷ ಪ್ರವೇಶದ ಟಿಕೆಟ್‌ನವರಿಗಾಗಿ ಹೊಸ ಕ್ಯೂಕಾಂಪ್ಲೆಕ್ಸ್‌ನಲ್ಲಿ ನೀರು ನೆರಳನ್ನು ಕಲ್ಪಿಸಲಾಗಿದ್ದಿತು. ಶಾಂತಿಪಾಲನೆಗಾಗಿ ಚಿತ್ತೂರು ಜಿಲ್ಲಾ ಪೋಲಿಸ್ ಸೂಪರಿಂಟೆಂಡೆಂಟರ ನೇತೃತ್ತ್ವದಲ್ಲಿ ಜಿಲ್ಲೆಯ ಇತರೆಡೆಗಳಿಂದ ಅಧಿಕ ರಕ್ಷಕ ಭಟರನ್ನು ಕರೆಸಲಾಗಿದ್ದು, ಯಾತ್ರಿಕರು ಪೋಲೀಸರು ಹಾಗೂ ದೇವಾಲಯದ ಅಧಿಕಾರಿಗಳೊಂದಿಗೆ ಸಂಪೂರ್ಣ ಸಹಕರಿಸಿದರು.

## ತಿರುಮಲೆಯ ಪುರೋಹಿತ ಸಂಘದಲ್ಲಿ ವಿವಿಧ ಕಾರ್ಯಗಳ ದರಗಳ ಹೆಚ್ಚಳ

ವಿವಿಧ ಜೀವನೋಪಯೋಗಿ ವಸ್ತುಗಳ ಹಾಗೂ ಪುಣ್ಯಕಾರ್ಯ ವಸ್ತುಗಳ ದರಗಳ ಹೆಚ್ಚಳದಿಂದಾಗಿ ತಿರುಮಲೆಯ ಪುರೋಹಿತ ಸಂಘದವರು ಯಾತ್ರಿಕರ ಸೌಲಭ್ಯಗಳಿಗಾಗಿ ನಡೆಸಿಕೊಡುತ್ತಿದ್ದ ಮದುವೆ, ಉಪನಯನ ಇತ್ಯಾದಿಗಳ ದರಗಳನ್ನು ಹೆಚ್ಚಿಸಲು ತಿ. ತಿ. ದೇವಸ್ಥಾನಗಳ ಆಡಳಿತ ನಿರ್ವಾಹಕ ಮಂಡಳಿ ಒಪ್ಪಿಗೆ ನೀಡಿದೆ. ಅದರಂತೆ ಕೆಳಕಂಡ ದರಗಳು ಕೂಡಲೇ ಜಾರಿಗೆ ಬಂದಿವೆ ಎಂದೂ ವರದಿಯಾಗಿದೆ.

| | | ಮೊದಲಿನ ದರ ರೂ॥ ಗಳಲ್ಲಿ | ಹೆಚ್ಚಿದ ದರ ರೂ॥ ಗಳಲ್ಲಿ |
|---|---|---|---|
| 1 | ಬ್ರಾಹ್ಮಣ ಹಾಗೂ ವೈಶ್ಯವಿವಾಹ | 36–00 | 50–00 |
| 2 | ಬ್ರಾಹ್ಮಣ ಹಾಗೂ ವೈಶ್ಯ ಉಪನಯನ | 32–00 | 40–00 |
| 3 | ಇತರ ವಿವಾಹಗಳು ( ಹೋಮವಿಲ್ಲದೆ ) | 22–00 | 30–00 |
| 4 | ಇತರ ವಿವಾಹಗಳು ಹೋಮದೊಡನೆ ಅಥವಾ ಕನ್ಯಾದಾನದೊಡನೆ | 34–00 | [illegible]6–00 |
| 5 | ಸತ್ಯನಾರಾಯಣ ವ್ರತ | 18–00 | 20–00 |
| 6 | ಕೇಶಖಂಡನ ಹಾಗೂ ಇತರ ಪೂಜೆಗಳು | 8–00 | 10–00 |
| 7 | ಪಿಂಡಪ್ರದಾನ | 5–00 | — |
| 8 | ಹಿರಣ್ಯಗೋದಾನ | 6–00 | — |
| 9 | ಅನ್ನದಾನ | 3–00 | — |
| 10 | ಸಾಲಿಗ್ರಾಮದಾನ | 1–25 | — |
| 11 | ಸಂಕಲ್ಪ | 1–00 | — |
| 12 | ಶೋಡಶ ಮಹಾದಾನ | 10–00 | — |
| 13 | ದಶದಾನ | 10–00 | — |
| 14 | ನವಗ್ರಹದಾನ | 9–00 | — |
| 15 | ಸಂಕಲ್ಪದಾನ | 1–00 | — |

## ಶ್ರೀವೆಂಕಟೇಶ್ವರ ಸ್ವಾಮಿಯ ಅಂತರ ರಾಷ್ಟ್ರೀಯ ಖ್ಯಾತಿ

ತಿರುಮಲೆಯ ಶ್ರೀವೆಂಕಟೇಶ್ವರ ಸ್ವಾಮಿ ದೇವಾಲಯವು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದದ್ದು ಮೊನ್ನೆ ಮತ್ತೊಂದು ಘಟನೆಯ ಮೂಲಕ ಮತ್ತಷ್ಟು ಸ್ಪಷ್ಟವಾಯಿತು.

1983 ರ ಕ್ರಿಸ್ಮಸ್ ದಿನದಂದು ಅಮೇರಿಕಾ ಸಂಯುಕ್ತ ಸಂಸ್ಥಾನಗಳ ನ್ಯೂಹೆವೆನ್ ಪ್ರಾಂತ್ಯದ ಯೇಲ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಡಾ॥ ಯುಟಾ ಫ್ರಾಂಕೆ ಹಾಗೂ ಡಾ॥ ಹೈನಿಜ್ ಫತ್‌ವೈರ್ ಅವರುಗಳು ಶ್ರೀವೆಂಕಟೇಶ್ವರ ಸ್ವಾಮಿಯನ್ನು ಸಂದರ್ಶಿಸಿದರು. ಶ್ರೀವೆಂಕಟೇ ಸ್ವಾಮಿಯ ಸಂದರ್ಶನ, ಆರಾಧನೆಗಳು ಯಾವುದೇ ಮತ ಪಂಥ ದೇಶದವರಿಗೂ ನಿಷಿದ್ಧವಲ್ಲವಾಗಿ ಅವರುಗಳನ್ನು ಹಲವು ಅಧಿಕೃತ ಅಂಶಗಳನ್ನು ಅನುಸರಿಸಿದನಂತರ ದೇವರ ಸಾನ್ನಿಧ್ಯಕ್ಕೆ ಬಿಡಲಾಯಿತು.

ಇಬ್ಬರು ಪ್ರಾಧ್ಯಾಪಕರೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿ ರೆಡ್ಡಿ ಅವರನ್ನು ಭೇಟಿ ಮಾಡಿ ದೇವಾಲಯದ ಆಡಳಿತ ನಿರ್ವಹಣೆಯ ಬಗ್ಗೆ ತಮ್ಮ ಮೆಚ್ಚಿಗೆಯನ್ನು ಸೂಚಿಸಿದರು. ಈ ದೇವಾಲಯದಲ್ಲಿ ಸ್ವಾಮಿಯನ್ನು ದರ್ಶಿಸಿದ್ದರಿಂದ ತಮಗೆ ಪ್ರಶಾಂತತೆ ದೊರಕಿದೆಯೆಂದೂ ತಿಳಿಸಿದರು. ಪರಿಸರ ಶುಭ್ರತೆಯ ಬಗ್ಗೆ ಮಾತನಾಡುತ್ತ ಅವರು ಈ ದೇವಾಲಯದ ಪರಿಶುಭ್ರತೆಯು ಯಾರ ಗಮನವನ್ನೇ ಆಗಲೀ ಮೊದಲ ನೋಟದಲ್ಲೇ ಸೆಳೆಯುವುದರ ಮೂಲಕ ಅಲೌಕಿಕ ಆಧ್ಯಾತ್ಮಿಕ ಪ್ರಪಂಚಕ್ಕೆ ಮನವನ್ನು ತಿರುಗಿಸುವಲ್ಲಿ ಸಹಕರಿಸುವುವೆಂದರು.

ಈ ಪ್ರಾಧ್ಯಾಪಕರುಗಳು ದೇಹಲಿಯಲ್ಲಿ ನಡೆದ ಜೈವಿಕ ಶಾಸ್ತ್ರದ ಸಮ್ಮೇಳನದಲ್ಲಿ ಭಾಗವಹಿಸಿ ತಮ್ಮ ದೇಶಕ್ಕೆ ಹಿಂದಿರುಗುವಾಗ ತಿರುಮಲೆಗೆ ಆಗಮಿಸಿದ್ದರು. ತಮಗೆ ತಿರುಮಲೆಯ ಪ್ರಶಾಂತತೆ, ಸೌಂದರ್ಯಸಿರಿಗಳು ಮನಮುಟ್ಟಿವೆಯೆಂದು ಅವರುಗಳು ತಿಳಿಸಿದರು.

( 4ನೇ ಪುಟದಿಂದ )

ಅಭಿನವ ವ್ಯಾಸರೆಂದು ಸಮಕಾಲೀನ ವಿದ್ವಾಂಸರಿಂದ ಗೌರವಪೂರ್ಣವಾಗಿ ಕರೆಸಿಕೊಂಡ ವ್ಯಾಸರಾಯರ ವಿಶಿಷ್ಟ ವ್ಯಕ್ತಿತ್ವವನ್ನು ಸೋಮನಾಥಕವಿ ತನ್ನ 'ವ್ಯಾಸಯೋಗಿ ಚರಿತಂ' ಕಾವ್ಯದಲ್ಲಿ ವಿವರಿಸಿದ್ದಾನೆ.

ವ್ಯಾಸರಾಯರು ಶ್ರೀನಿವಾಸನನ್ನು ಕುರಿತು ಆಡಿರುವ ಸಂಸ್ಕೃತ ಸ್ತೋತ್ರದ ಒಂದು ಭಾಗ ಹೀಗಿದೆ.

ಪ್ರಾತಃ ಸ್ಮರಾಮಿ
ರಮಯಾ ಸಹ ವೆಂಕಟೇಶಂ
ಮಂದಸ್ಮಿತಂ
ಮುಖಸರೋರುಹ ಕಾಂತಿರಮ್ಯಂ।
ಮಾಣಿಕ್ಯಕಾಂತಿ
ವಿಲಸನ್ಮುಕುಟೋರ್ಧ್ವ ಪುಂಡ್ರಂ
ಪದ್ಮಾಕ್ಷ
ಲಕ್ಷಮಣಿ ಕುಂಡಲ ಮಂಡಿತಾಂಗಂ॥

**ಅನ್ನಮಾಚಾರ್ಯ :** (ಹಿಂಬದಿಯ ಪುಟ)

ದಕ್ಷಿಣಾಪಥದಲ್ಲಿ ಭಕ್ತಿ ಪಂಥದ ಪಸರಿಕೆಗೆ ಶ್ರೀವೈಷ್ಣವವೂ ತನ್ನ ಕೊಡುಗೆಯನ್ನು ನೀಡಿದೆ. ರಾಮಾನುಜಾಚಾರ್ಯರ ಪರಿವ್ರಾಜಕ ಜೀವನವೂ, ಅವರು ಮೇಲುಕೋಟೆ, ತಿರುಪತಿ, ಶ್ರೀರಂಗ ಮೊದಲಾದ ಕಡೆಗಳಲ್ಲಿದ್ದ ದೇವಾಲಯಗಳ ಪೂಜಾಪದ್ಧತಿಗಳಲ್ಲಿ ಮಾಡಿದ ಸುಧಾರಣೆಗಳೂ, ಭಕ್ತಿಯನ್ನು ಜನಕ್ಕೆ ಹತ್ತಿರ ತಂದವು. ಕಾಲಾನುಕ್ರಮದಲ್ಲಿ ಅವರ ತತ್ತ್ವದಲ್ಲಿನ ಹಿರಿಮೆಯನ್ನು ಕಂಡುಂಡ ಕವಿ, ವಿದ್ವಾಂಸ ಸಂತರೂ ತಾವು ಮನಗಂಡದ್ದನ್ನು ಇತರರಿಗೂ ಮನಗಾಣಿಸಲು ಭಾಷೆಯನ್ನು ಯಶಸ್ವಿ ಮಾಧ್ಯಮವಾಗಿ ಬಳಸಿದರು. ಅಂತಹವರಲ್ಲಿ ತಾಳ್ಳಪಾಕದ ಅನ್ನಮಾಚಾರ್ಯರೂ ಒಬ್ಬರು.

ಕಡಪ ಜಿಲ್ಲೆಯ ರಾಜಂಪೇಟೆಯ ಬಳಿಯ ತಾಳ್ಳಪಾಕದಲ್ಲಿ ಹುಟ್ಟಿದ ಅನ್ನಮಾಚಾರ್ಯ ತಿರುಮಲೆಗೆ ಆಗಮಿಸಿದಾಗ ಶ್ರೀವೈಷ್ಣವವನ್ನು ಸ್ವೀಕರಿಸಿದ್ದು ವೈಯುಕ್ತಿಕ ಲಾಭ ಮಾತ್ರವೇನಾಗಿರಲಿಲ್ಲ. ಆದರಿಂದ ಅಂದಿನ ಸಮಾಜಕ್ಕೆ, ( ಇಂದಿನ ಸಮಾಜಕ್ಕೂ ಹೌದು ) ತೆಲುಗು ಸಾಹಿತ್ಯಕ್ಕೆ, ಪ್ರಮುಖವಾಗಿ ಶ್ರೀ ವೆಂಕಟೇಶ್ವರ ಸ್ವಾಮಿಯ ಭಕ್ತರಿಗೆಲ್ಲ ಲಾಭವಾಯಿತೆಂದು ಹೇಳಬೇಕು.

ಅನ್ನಮಾಚಾರ್ಯರಿಗೆ ಶ್ರೀ ವೆಂಕಟೇಶ್ವರ ಸ್ವಾಮಿಯ ಬಗ್ಗೆ ಅಪರಿಮಿತ ಭಕ್ತಿ, ಅಹೋಬಿಲ, ಕದಿರಿ ಮೊದಲಾದೆಡೆಗಳ ದೇವರನ್ನು ಆತ ಸ್ತುತಿಸಿದ್ದರೂ, ತಿರುಮಲೆಯ ಸ್ವಾಮಿಯೇ ಆತನಿಗೆ ಸರ್ವಸ್ವ. ಎಂತಲೇ ಈ ಸ್ವಾಮಿ ಕೈಂಕರ್ಯದಲ್ಲಿ ಮೂವತ್ತೆರಡು ಸಾವಿರ ಕೀರ್ತನೆಗಳನ್ನು ಆತ ರಚಿಸಲು ಸಾಧ್ಯವಾಯಿತು. ಶಾಸ್ತ್ರವ್ಯಾಸಂಗ, ಮಿಗಿಲಾದ ಪ್ರತಿಭೆಗಳಿಂದಾಗಿ ಪಂಡಿತ ಪಾಮರ ರಂಜಕವಾಗುವಂತೆ ಆತ ಬರೆದ ಕೀರ್ತನೆಗಳಿಂದ ತೆಲುಗಿನಲ್ಲಿ 'ಪದಕವಿತಾ ಪಿತಾಮಹ' 'ಸಂಕೀರ್ತನಾಚಾರ್ಯ' ಎಂಬ ಹೆಸರುಗಳನ್ನು ತನ್ನ ಜೀವನಕಾಲದಲ್ಲಿಯೇ ಪಡೆದವರು. ಇಷ್ಟಾದರೂ 'ನನ್ನ ನಾಲಗೆಯ ಮೂಲಕ ನಾನಾ ಸಂಕೀರ್ತನೆಗಳನ್ನು ಹಾಡಿಸಿ ಹೊಗಳಿಸಿ

## 1984,

# ಏಪ್ರಿಲ್ ತಿಂಗಳಿನ ಮುಖ್ಯದಿನಗಳು

| | | | |
|---|---|---|---|
| 2. | ಸೋಮವಾರ | ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಾಲಯದಲ್ಲಿ ಉಗಾದಿ ಆಸ್ಥಾನ. | |
| 3. | ಮಂಗಳವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವ | ಗರುಡಸೇವೆ. |
| 6. | ಶುಕ್ರವಾರ | ... | ರಥೋತ್ಸವ. |
| 7. | ಶನಿವಾರ | ... | ಚಕ್ರಸ್ನಾನ. |
| 10. | ಮಂಗಳವಾರ | ಶ್ರೀರಾಮನವಮಿ. | |
| 13. | ಶುಕ್ರವಾರ | ತಮಿಳು ಉಗಾದಿ. ಶ್ರೀ ವೆಂಕಟೇಶ್ವರಸ್ವಾಮಿ ವಸಂತೋತ್ಸವ ಆರಂಭ- | |
| 14. | ಶನಿವಾರ | ಶ್ರೀ ವೆಂಕಟೇಶ್ವಸ್ವಾಮಿ ರಜತ ರಥೋತ್ಸವ. | |
| 15. | ಭಾನುವಾರ | ಚಿತ್ರಾ ಪೂರ್ಣಿಮೆ. ಶ್ರೀ ವೆಂಕಟೇಶ್ವರಸ್ವಾಮಿ ವಸಂತೋತ್ಸವ ಸಮಾಪ್ತಿ, | |
| 16 | ಸೋಮವಾರ | ನಾಗಲಾಪುರ ಶ್ರೀ ವೇದನಾರಾಯಣಸ್ವಾಮಿ | ಬ್ರಹ್ಮೋತ್ಸವಾರಂಭ. |
| 20. | ಶುಕ್ರವಾರ | ... | ಗರುಡಸೇವೆ. |
| 23. | ಸೋಮವಾರ | ... | ರಥೋತ್ಸವ |
| 24. | ಮಂಗಳವಾರ | ... | ಚಕ್ರಸ್ನಾನ. |

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ - — ಏಪ್ರಿಲ್ 1984**

**ಧರ್ಮಾತ್ಮ ವಿಭೀಷಣ**
– ಡಾ॥ ಎನ್. ಅನಂತರಂಗಾಚಾರ್

**ಪಂಪ ರಾಮಾಯಣದ ರಾವಣ**
– ಭಾರ್ಗವಿಶ್ರೀ

**ದಾಸೋಹಂ ಕೋಸಲೇಂದ್ರಸ್ಯ**
– ಎಸ್. ನರಸಿಂಹಾಚಾರ್ಯ

**ಉಗಾದಿ ಹಬ್ಬ**
– ಗಣಪತಿಭಟ್ಟ, ಆರ್ಶಿಕಜೆ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**
**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಬರೆಯಿರಿ.

ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

ಕೊಂಡವನು ನೀನು, ಹಾಡಲು ನಾನೆಷ್ಟರವನು, ನೀನೇ ನನಗೆ 'ಈ ಪುಣ್ಯವನ್ನು ಸಂಗ್ರಹಿಸಿ ಕೊಟ್ಟಿರುವೆ' ಎಂಬ ಸರ್ವಸಮರ್ಪಣಭಾವ ಆತನದು.

ಅಲಮೇಲು ಮಂಗಾಶತಕ, ವೆಂಕಟೇಶ್ವರ ಶತಕ, ದ್ವಿಪದರಾಮಾಯಣ, ಸಂಕೀರ್ತನ ಲಕ್ಷಣ, ಮೊದಲಾದ ಹಲವು ಕೃತಿಗಳೊಂದಿಗೆ ಆತ ಬರೆದ ಸಂಕೀರ್ತನೆಗಳನ್ನು ಆಧ್ಯಾತ್ಮ ಸಂಕೀರ್ತನೆಗಳೆಂದೂ, ಶೃಂಗಾರ ಸಂಕೀರ್ತನೆಗಳೆಂದೂ ಸ್ಥೂಲವಾಗಿ ವಿಂಗಡಿಸುವುದುಂಟು. ಈ ಕೀರ್ತನೆಗಳು ಚಿನ ತಿರುಮಲಾಚಾರ್ಯ ಹೇಳುವಂತೆ 'ಪಾವನ, ಹರಿಭಕ್ತಿ ವಿಭಾವನ, ಸರ್ವ ಮಂತ್ರ ರಹಸ್ಯೋದ್ಭಾವನ, ಗಾಯಕನಿಕರಾವನ ತಾಳ್ಳಪಾಕ ಅನ್ನಮಯ್ಯನ ಪದಗುಂಫನ'. ಅವರವರ ಮಾತೇಕೆ 'ಅನ್ನಮಾಚಾರ್ಯರೇ ಹೇಳವಂತೆ 'ಒಂದು ಕೀರ್ತನೆಯೇ ಸಾಕು ಹೊದ್ದಿಕೆಯೊಲು ನಮ್ಮ ರಕ್ಷಿಸಲು, ಮಿಕ್ಕದ್ದು ಭಂಡಾರದಲ್ಲಿರಲಿ, ನಿನ್ನ ಪಾದ ಪೂಜೆಯಲ್ಲಿ ನಾ ತಂದ ಹೂಗಳವು'.

ಅನ್ನಮಾಚಾರ್ಯ ಹಾಗೂ ಶ್ರೀ ವೆಂಕಟೇಶ್ವರಸ್ವಾಮಿಯ ಅನುಬಂಧ ಜೀವಾತ್ಮ ಪರಮಾತ್ಮರ ಅನುಬಂಧ. ಅದು ಎಲ್ಲ ರೂಪಗಳಲ್ಲಿ, ಎಲ್ಲ ಭಾವಗಳಲ್ಲಿ ಅನ್ನಮಾಚಾರ್ಯರ ಕೀರ್ತನೆಗಳಲ್ಲಿ ಪ್ರಕಟವಾಗಿದೆ. ಶ್ರೇಷ್ಠ ಕವಿಯೊಬ್ಬನ ಸರ್ವಾರ್ಪಣ ಭಾವದಿಂದ ಎಂತಹ ಸುಂದರ ಸಂಕೀರ್ತನೆಯುಂಟಾಗಬಹುದೆಂಬುದಕ್ಕೆ ಪ್ರತೀಕ.

ದೇವ ದೇವಂ ಭಜೇ ದಿವ್ಯಪ್ರಭಾವಂ
ರಾವಣಾಸುರವೈರಿ ರಣಪುಂಗವಂ
ಪಂಕಜಾಸನ ವಿನುತ ಪರಮನಾರಾಯಣಂ
ಶಂಕರಾರ್ಜಿತ ಜನಕ ಚಾಪದಳನಂ
ಲಂಕಾವಿಶೋಷಣಂ ಲಾಲಿತ ವಿಭೀಷಣಂ
ವೆಂಕಟೇಶಂ ಸಾಧು ವಿಬುಧ ವಿನುತಂ

## ತಿದ್ದುಪಡಿ

ಇದೇ ಸಂಚಿಕೆಯ 6 ನೇ ಪುಟದಲ್ಲಿ ಪ್ರಕಟವಾಗಿರುವ ಸಪ್ತಗಿರಿ ಬಗೆಗಿನ ಇಂಗ್ಲೀಷ್ ವಿವರ ಪತ್ರದಲ್ಲಿ (Form IV) ಕೊನೆಯಲ್ಲಿರುವ ದಿನಾಂಕ ಸೂಚಿ 29–2–83 ಎಂದು ತಪ್ಪಾಗಿ ಮುದ್ರಿತವಾಗಿದೆ. ಅದನ್ನು 29–2–84 ಎಂದು ಓದಿಕೊಳ್ಳಬೇಕಾಗಿ ವಿನಂತಿ. –ಸಂ॥

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

